KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಡಿಸೆಂಬರ್ ೭, ೨೦೦೬ (ಮಾರ್ಗಶಿರ ೧೬, ಶಕ ವರ್ಷ ೧೯೨೮) | ಸಂಚಿಕೆ ೪೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮಾರಾಟಾಧಿಕಾರಿಗಳು ನಿ.441, ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ, ಇವರ ನಡವಳಿಕೆಗಳು**

**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸ್**

**(ನೋಟೀಸ್ ಆಫ್ ಅಟ್ಯಾಚ್ಮೆಂಟ್)**

1960ರ ಕ.ಸ.ಸಂಘಗಳ ನಿಯಮ 38(2)ಸಿ ರನ್ವಯ

**ದಾವಾ ಸಂಖ್ಯೆ: 105/99-2000,**

**ಇ.ಪಿ.ಸಂಖ್ಯೆ: 751/99-2000, ದಾವಣಗೆರೆ, ದಿನಾಂಕ: 30ನೇ ಅಕ್ಟೋಬರ್ 2006**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಸಾಲಗಾರರಾದ ಮೆ: ದೊಗ್ಗಳ್ಳಿ, ಮಲ್ಕಪ್ಪ ಮತ್ತು ಮಕ್ಕಳು, ಎಪಿಎಂಸಿ ಯಾರ್ಡ್ 'ಎ' ಬ್ಲಾಕ್, ದಾವಣಗೆರೆ-3 ಇದರ ಪರವಾಗಿ 1) ಡಿ.ದಯಾನಂದ ಮತ್ತು 2) ಡಿ. ಚಂದ್ರಶೇಖರ್ ಬಿನ್ ಲೇಟ್ ಡಿ.ಪರಮೇಶ್ವರಪ್ಪ ಹಾಲಿ ವಿಳಾಸ: ಡೋರ್ ನಂ.6/212, ನರಸರಾಜ ರಸ್ತೆ, ದಾವಣಗೆರೆ-1. ಇವರಿಂದ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಬಾಕಿ ವಸೂಲಿಗಾಗಿ ಸಾಲಗಾರರ ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಸ್ಥಿರ ಸ್ವತ್ತುಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರನ್ವಯ ಜಪ್ತಿ (ಅಟ್ಯಾಚ್ಮೆಂಟ್) ಮಾಡುವ ಕುರಿತು.

ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಸುಸ್ತಿ ಬಾಕಿದಾರ ಸಾಲಗಾರರಾದ ಮೆ: ದೊಗ್ಗಳ್ಳಿ ಮಲ್ಕಪ್ಪ ಮತ್ತು ಮಕ್ಕಳು, ಎಪಿಎಂಸಿ ಯಾರ್ಡ್ 'ಎ' ಬ್ಲಾಕ್, ದಾವಣಗೆರೆ-3 ಇದರ ಪರವಾಗಿ 1) ಡಿ.ದಯಾನಂದ ಮತ್ತು 2) ಡಿ. ಚಂದ್ರಶೇಖರ್ ಬಿನ್ ಲೇಟ್ ಡಿ.ಪರಮೇಶ್ವರಪ್ಪ ಹಾಲಿ ವಿಳಾಸ: ಡೋರ್ ನಂ.6/212, ನರಸರಾಜ ರಸ್ತೆ, ದಾವಣಗೆರೆ-1. ಇವರುಗಳ ವಿರುದ್ಧ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಗೌರವ ಪಂಚಾಯಿತಿದಾರರು, ದಾವಣಗೆರೆ ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಹೂಡಲಾಗಿದ್ದ ದಾವಾ ಸಂಖ್ಯೆ:105/99-2000, ಇದರಲ್ಲಿ ದಿನಾಂಕ: 20.07.1999 ರಂದು ಆಗಿರುವ ಡಿಕ್ರಿ ಆದೇಶದ ಪ್ರಕಾರ ಹಾಗೂ ಇದರನ್ವಯ ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣ (Execution Petition)ರ ಪ್ರಕಾರ ಸದರಿಯವರ ಬ್ಯಾಂಕಿಗೆ ಅವರ ಸಾಲದ ಸಂಬಂಧ ಆಧಾರ ಮಾಡಲಾಗಿದ್ದ ಸ್ಥಿರ ಸ್ವತ್ತನ್ನು ಕಲಂ 101ಬಿ ರಡಿಯಲ್ಲಿ ವಸೂಲಾಧಿಕಾರಿಗಳವರು ಬ್ಯಾಂಕಿಗೆ ಮಾಲೀಕತ್ವವನ್ನು ದಿನಾಂಕ: 12.05.2004ರ ಆದೇಶದ ಪ್ರಕಾರ ವರ್ಗಾವಣೆ ಮಾಡಿದ್ದು, ಬ್ಯಾಂಕು ಈ ಸ್ಥಿರ ಸ್ವತ್ತನ್ನು ದಿನಾಂಕ: 17.08.2006 ರಂದು ಬಹಿರಂಗ ಹರಾಜು ಮೂಲಕ ರೂ.11,25,000-00 ಮೊತ್ತಕ್ಕೆ ಮಾರಾಟ ಮಾಡಿ, ಈ ದಿನಾಂಕಕ್ಕೆ ಬ್ಯಾಂಕಿಗೆ ಬರಬೇಕಾದ ಒಟ್ಟು ಸಾಲದ ಮೊತ್ತ ರೂ.16,09.070-00 ಗೆ ಈ ಮಾರಾಟದ ಮೊತ್ತವನ್ನು ಹೊಂದಾಣಿಕೆ ಮಾಡಿರುತ್ತದೆ. ಆದಾಗ್ಯೂ ಅವರ ಸಾಲದ ಬಾಕಿಯೂ ಪೂರ್ಣವಾಗಿ ತೀರುವಳಿಯಾಗದೇ ಸದರಿ ದಿನಾಂಕಕ್ಕೆ ರೂ.4,84,070-00 ಮೊತ್ತ ಬಾಕಿ ಉಳಿದಿರುತ್ತದೆ.

ಸಾಲಗಾರರು ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ಪಾವತಿಸಿರುವುದಿಲ್ಲ, ಡಿಕ್ರಿ ಆದೇಶದ ನಿರ್ದೇಶನದನ್ವಯ ಸದರಿಯವರಿಂದ ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ವಸೂಲಿ ಮಾಡಿಕೊಳ್ಳಲು ಸದರಿ ಸಾಲಗಾರರ

ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಇತರೆ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿ ಅವುಗಳನ್ನು ಮಾರಾಟ ಮಾಡುವುದರ ಮೂಲಕ ಸಾಲದ ಬಾಕಿಯನ್ನು ವಸೂಲಿ ಮಾಡಿಕೊಳ್ಳಬೇಕಾಗಿದ್ದು, ಈ ಸಂಬಂಧ ಸಾಲಗಾರರು ಇತರೆ ಕೃಷಿಯೇತರ ಸ್ಥಿರ ಸ್ವತ್ತುಗಳನ್ನು ಹೊಂದಿರುವ ಬಗ್ಗೆ ಮಾಹಿತಿ ಲಭ್ಯವಿಲ್ಲದೇ ಇರುವ ಕಾರಣ ಅವರಿಗೆ ಸೇರಿದ ಕೃಷಿ ಭೂಮಿಯನ್ನು ಜಪ್ತಿ ಮಾಡಬೇಕಾಗಿರುತ್ತದೆ.

ಈ ಪ್ರಕಾರವಾಗಿ ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ನಿ.441ರ ಮಾರಾಟಾಧಿಕಾರಿ ಎಸ್.ಎ. ಸಿದ್ಧೀಖ್, ಆದ ನಾನು ದಾವಾ ನಂ.105/99–2000 ರಡಿ ಪಡೆಯಲಾದ ಇ.ಪಿ.ನಂ.751/99–2000 ರನ್ವಯ ಪಡೆಯಲಾದ ಅಮಲ್ಜಾರಿ ಅಧಿಕಾರದ ಪ್ರಕಾರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 102 ರಡಿಯಲ್ಲಿ ಸಿವಿಲ್ ಕೋರ್ಟ್‌ನ ಅಧಿಕಾರಗಳನ್ನು ಹೊಂದಿರುವ ಅನುಸಾರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬ್ಯಾಂಕಿನ ಸಾಲಗಾರರಾದ ಮೆ: ದೊಗ್ಗಳ್ಳಿ ಮಲ್ಕಪ್ಪ ಮತ್ತು ಮಕ್ಕಳು, ಎಪಿಎಂಸಿ ಯಾರ್ಡ್ 'ಎ' ಬ್ಲಾಕ್, ದಾವಣಗೆರೆ–3 ಇದರ ಪರವಾಗಿ 1) ಡಿ. ದಯಾನಂದ ಮತ್ತು 2) ಡಿ.ಚಂದ್ರಶೇಖರ್ ಬಿನ್ ಲೇಟ್ ಡಿ.ಪರಮೇಶ್ವರಪ್ಪ ಹಾಲಿ ವಿಳಾಸ: ಮನೆ ನಂ.6/212, ನರಸರಾಜ ರಸ್ತೆ, ದಾವಣಗೆರೆ–1 ಇವರ ಈ ಕೆಳಕಾಣಿಸಿದ ಸ್ಥಿರ ಸ್ವತ್ತುಗಳನ್ನು ಮೇಲ್ಕಾಣಿಸಿದ ಅವರ ಸಾಲದ ಬಾಕಿ ವಸೂಲಿಗಾಗಿ ಈ ಮೂಲಕ ಜಪ್ತಿ (ಅಟ್ಯಾಚ್) ಮಾಡಲಾಗಿದೆ.

**ಜಪ್ತಿ ಮಾಡಲಾದ ಸ್ಥಿರಾಸ್ತಿ ಷೆಡ್ಯೂಲ್**

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮ | ಸ್ಥಿರಾಸ್ತಿ | ವಿಸ್ತೀರ್ಣ | ಸರ್ವೆ ನಂ. | ಷರಾ |
|---|---|---|---|---|---|---|---|---|
| 1 | ದಾವಣಗೆರೆ | ದಾವಣಗೆರೆ | ಕಸಬಾ | ನಾಗನೂರು | ತರಿ ಕೃಷಿ ಜಮೀನು (ತೆಂಗು, ಅಡಿಕೆ) | ಎ–ಗುಂ. 7.22 | 136/ಪಿ–1 | ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದಕ್ಕೆ ಜಪ್ತಿ ಮಾಡಲಾಗಿದೆ. |

ಮೇಲ್ಕಂಡಂತೆ ಸದರಿ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿರುವ ಬಗ್ಗೆ ಮೆ: ದೊಗ್ಗಳ್ಳಿ, ಮಲ್ಕಪ್ಪ ಮತ್ತು ಮಕ್ಕಳು, ಎಪಿಎಂಸಿ ಯಾರ್ಡ್ 'ಎ' ಬ್ಲಾಕ್, ದಾವಣಗೆರೆ–3 ಇದರ ಪರವಾಗಿ 1) ಡಿ.ದಯಾನಂದ ಮತ್ತು 2) ಡಿ. ಚಂದ್ರಶೇಖರ್ ಬಿನ್ ಲೇಟ್ ಡಿ.ಪರಮೇಶ್ವರಪ್ಪ ಹಾಲಿ ವಿಳಾಸ: ಡೋರ್ ನಂ.6/212, ನರಸರಾಜ ರಸ್ತೆ, ದಾವಣಗೆರೆ–1. ಇವರ ಮೇಲ್ಕಾಣಿಸಿದ ಆಸ್ತಿ ದಾಖಲೆಗಳಲ್ಲಿ (ರೆಕಾರ್ಡ್ ಆಫ್ ರೈಟ್ಸ್‌ನಲ್ಲಿ) ಮುಂದಿನ ಸೂಚನೆಯವರೆಗೆ ದಾಖಲಿಸಲು ಗ್ರಾಮ ಲೆಕ್ಕಾಧಿಕಾರಿಗಳು, ಕಸಬಾ ಹೋಬಳಿ, ದಾವಣಗೆರೆ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರಿಗೆ ಸೂಚಿಸಲಾಗಿದೆ.

ಮೆ: ದೊಗ್ಗಳ್ಳಿ, ಮಲ್ಕಪ್ಪ ಮತ್ತು ಮಕ್ಕಳು, ಎಪಿಎಂಸಿ ಯಾರ್ಡ್ 'ಎ' ಬ್ಲಾಕ್, ದಾವಣಗೆರೆ–3 ಇದರ ಪರವಾಗಿ 1) ಡಿ.ದಯಾನಂದ ಮತ್ತು 2) ಡಿ. ಚಂದ್ರಶೇಖರ್ ಬಿನ್ ಲೇಟ್ ಡಿ.ಪರಮೇಶ್ವರಪ್ಪ ಹಾಲಿ ವಿಳಾಸ: ಡೋರ್ ನಂ.6/212, ನರಸರಾಜ ರಸ್ತೆ, ದಾವಣಗೆರೆ–1 ಇವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಪೂರ್ಣ ಬಾಕಿಯನ್ನು ಬಡ್ಡಿ ಮತ್ತು ಇತರೆ ಖರ್ಚುಗಳೊಂದಿಗೆ ದಿನಾಂಕ: 30.11.2006 ರೊಳಗಾಗಿ ಪೂರ್ಣವಾಗಿ ಪಾವತಿ ಮಾಡದೇ ಇದ್ದರೆ ಈ ನೋಟೀಸಿನ ಪ್ರಕಾರ ಜಪ್ತಿ (ಅಟ್ಯಾಚ್) ಮಾಡಲ್ಪಟ್ಟಿರುವ ಮೇಲ್ಕಂಡ ಸ್ಥಿರ ಸ್ವತ್ತುಗಳನ್ನು ಮಾರಾಟ ಮಾಡಲಾಗುವುದು.

ಈ ನೋಟೀಸ್ ಆಫ್ ಅಟ್ಯಾಚ್ಮೆಂಟನ್ನು ಈ ದಿನ ದಿನಾಂಕ: 30.10.2006 ರಂದು ಜಾರಿ ಮಾಡಲಾಗಿದೆ.

ಮಾರಾಟಾಧಿಕಾರಿಗಳು, ನಿ.441,
ಪಿ.ಡಿ. 133 ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ.

**ಮಾರಾಟಾಧಿಕಾರಿಗಳು ನಿ.441, ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ, ಇವರ ನಡವಳಿಕೆಗಳು**
**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸ್**
**(ನೋಟೀಸ್ ಆಫ್ ಅಟ್ಯಾಚ್ಮೆಂಟ್)**
**1960ರ ಕ.ಸ.ಸಂಘಗಳ ನಿಯಮ 38(2)ಸಿ ರನ್ವಯ**
**ದಾವಾ ಸಂಖ್ಯೆ: ಡಿಆರ್/ಡಿವಿಜಿ/388/2002–03,**
**ಇ.ಪಿ.ಸಂಖ್ಯೆ: 1274/2002–2003,**
**ಸಿಇಪಿ ನಂ. ಎಆರ್ಇ/ಯುಬಿಎಫ್/1740/2005–06(ವ) ದಾವಣಗೆರೆ, ದಿನಾಂಕ: 30ನೇ ಅಕ್ಟೋಬರ್ 2006**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಸಾಲಗಾರರಾದ ದಿವಂಗತ ಕೆ.ಚಂದ್ರಶೇಖರಪ್ಪ ಬಿನ್ ಕಲ್ಲಿಂಗಪ್ಪ ಮತ್ತು ವಾರಸುದಾರರು, ಕೆ.ಕೆ.ಟ್ರೇಡರ್ಸ್, ಎಪಿಎಂಸಿ ಯಾರ್ಡ್ 'ಬಿ' ಬ್ಲಾಕ್, ದಾವಣಗೆರೆ (ಹಾಲಿ ವಾಸ–ಮನೆ ನಂ.2616/3, ಎಂಸಿಸಿ 'ಬಿ' ಬ್ಲಾಕ್, ದಾವಣಗೆರೆ ಇವರಿಂದ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಬಾಕಿ ವಸೂಲಿಗಾಗಿ ಸಾಲಗಾರರ ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಸ್ಥಿರ ಸ್ವತ್ತುಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರನ್ವಯ ಜಪ್ತಿ (ಅಟ್ಯಾಚ್ಮೆಂಟ್) ಮಾಡುವ ಕುರಿತು.

ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಸುಸ್ತಿ ಬಾಕಿದಾರ ಸಾಲಗಾರರಾದ ದಿವಂಗತ ಕೆ.ಚಂದ್ರಶೇಖರಪ್ಪ ಬಿನ್ ಕಲ್ಲಿಂಗಪ್ಪ ಮತ್ತು ವಾರಸುದಾರರು, ಕೆ.ಕೆ.ಟ್ರೇಡರ್ಸ್, ಎಪಿಎಂಸಿ ಯಾರ್ಡ್ 'ಬಿ' ಬ್ಲಾಕ್, ದಾವಣಗೆರೆ

(ಹಾಲಿ ವಾಸ-ಮನೆ ನಂ.2616/3, ಎಂಸಿಸಿ 'ಬಿ' ಬ್ಲಾಕ್, ದಾವಣಗೆರೆ ಇವರ ವಿರುದ್ಧ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಹೂಡಲಾಗಿದ್ದ ದಾವಾ ಸಂಖ್ಯೆ:ಡಿಆರ್/ಡಿವಿಜಿ/388/2002-03, ಇದರಲ್ಲಿ ದಿನಾಂಕ: 30.11.2002 ರಂದು ಆಗಿರುವ ಡಿಕ್ರಿ ಆದೇಶದ ಪ್ರಕಾರ ಹಾಗೂ ಇದರನ್ವಯ ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣ (Execution Petition)ರ ಪ್ರಕಾರ ಬ್ಯಾಂಕಿಗೆ ಸದರಿಯವರ ಸಾಲದ ಸಂಬಂಧ ಆಧಾರ ಮಾಡಲಾಗಿದ್ದ ಸ್ಥಿರ ಸ್ವತ್ತನ್ನು ದಿನಾಂಕ: 01.06.2006 ರಂದು ನಡೆಸಲಾದ ಬಹಿರಂಗ ಹರಾಜಿನಲ್ಲಿ ರೂ.4.75 ಲಕ್ಷಕ್ಕೆ ಮಾರಾಟ ಮಾಡಲಾಗಿದ್ದು, ಈ ಹರಾಜು ಮಾರಾಟವನ್ನು ವಸೂಲಾಧಿಕಾರಿಗಳವರು ದಿನಾಂಕ: 22.08.2006ರ ಆದೇಶದ ಪ್ರಕಾರ ಸ್ಥಿರೀಕರಿಸಿರುತ್ತಾರೆ. ಈ ಆದೇಶದ ಪ್ರಕಾರ ಸದರಿ ದಿನಾಂಕಕ್ಕೆ ಬ್ಯಾಂಕಿಗೆ ಬರಬೇಕಾದ ಒಟ್ಟು ಸಾಲದ ಮೊತ್ತ ರೂ.11,99,219-00ಗೆ ಈ ಮಾರಾಟದ ಮೊತ್ತವನ್ನು ಹೊಂದಾಣಿಕೆ ಮಾಡಲಾಗಿರುತ್ತದೆ. ಆದಾಗ್ಯೂ ಅವರ ಸಾಲದ ಬಾಕಿಯು ಪೂರ್ಣವಾಗಿ ತೀರುವಳಿಯಾಗದೇ ಸದರಿ ಆದೇಶದ ದಿನಾಂಕಕ್ಕೆ ರೂ.7,24,219-00 ಮೊತ್ತ ಬಾಕಿ ಉಳಿದಿರುತ್ತದೆ.

ಸಾಲಗಾರರು ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ಪಾವತಿಸಿರುವುದಿಲ್ಲ, ಡಿಕ್ರಿ ಆದೇಶದ ನಿರ್ದೇಶನದನ್ವಯ ಸದರಿಯವರಿಂದ ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ವಸೂಲಿ ಮಾಡಿಕೊಳ್ಳಲು ಸದರಿ ಸಾಲಗಾರರ ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಇತರೆ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿ ಅವುಗಳನ್ನು ಮಾರಾಟ ಮಾಡುವುದರ ಮೂಲಕ ಸಾಲದ ಬಾಕಿಯನ್ನು ವಸೂಲಿ ಮಾಡಿಕೊಳ್ಳಬೇಕಾಗಿದ್ದು, ಈ ಸಂಬಂಧ ಸಾಲಗಾರರು ಇತರೆ ಕೃಷಿಯೇತರ ಸ್ಥಿರ ಸ್ವತ್ತುಗಳನ್ನು ಹೊಂದಿರುವ ಬಗ್ಗೆ ಮಾಹಿತಿ ಲಭ್ಯವಿಲ್ಲದೇ ಇರುವ ಕಾರಣ ಅವರಿಗೆ ಸೇರಿದ ಕೃಷಿ ಭೂಮಿಯನ್ನು ಜಪ್ತಿ ಮಾಡಬೇಕಾಗಿರುತ್ತದೆ.

ಈ ಪ್ರಕಾರವಾಗಿ ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ನಿ.441ರ ಮಾರಾಟಾಧಿಕಾರಿ ಎಸ್.ಎ. ಸಿದ್ದೀಖ್, ಆದ ನಾನು ದಾವಾ ಸಂಖ್ಯೆ:ಡಿಆರ್/ಡಿವಿಜಿ/388/2002-03, ರಡಿ ಪಡೆಯಲಾದ ಇ.ಪಿ.ನಂ.1274/2002-03 (ಸಿಇಪಿ ನಂ.ಎಆರ್ಇ/ಯುಬಿಎಫ್/1740/2005-06(ವ)) ರನ್ವಯ ಪಡೆಯಲಾದ ಅಮಲ್ಜಾರಿ ಅಧಿಕಾರದ ಪ್ರಕಾರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 102 ರಡಿಯಲ್ಲಿ ಸಿವಿಲ್ ಕೋರ್ಟ್‌ನ ಅಧಿಕಾರಗಳನ್ನು ಹೊಂದಿರುವ ಅನುಸಾರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬ್ಯಾಂಕಿನ ಸಾಲಗಾರರಾದ ದಿವಂಗತ ಕೆ.ಚಂದ್ರಶೇಖರಪ್ಪ ಬಿನ್ ಕಲ್ಲಿಂಗಪ್ಪ ಮತ್ತು ಅವರ ವಾರಸುದಾರರ ಈ ಕೆಳಕಾಣಿಸಿದ ಸ್ಥಿರ ಸ್ವತ್ತುಗಳನ್ನು ಮೇಲ್ಕಾಣಿಸಿದ ಅವರ ಸಾಲದ ಬಾಕಿ ವಸೂಲಿಗಾಗಿ ಈ ಮೂಲಕ ಜಪ್ತಿ (ಅಟ್ಯಾಚ್) ಮಾಡಲಾಗಿದೆ.

**ಜಪ್ತಿ ಮಾಡಲಾದ ಸ್ಥಿರಾಸ್ತಿ ಷೆಡ್ಯೂಲ್**

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮ | ಸ್ಥಿರಾಸ್ತಿ | ವಿಸ್ತೀರ್ಣ | ಸರ್ವೆ ನಂ. | ಷರಾ |
|---|---|---|---|---|---|---|---|---|
| 1 | ಚಿತ್ರದುರ್ಗ | ಚಿತ್ರದುರ್ಗ | ಭರಮಸಾಗರ | ಕೊಳಹಾಳು | ಖುಷ್ಕಿ ಕೃಷಿ ಜಮೀನು | ಎ-ಗುಂ. 1.4 | 27/2ಪಿ6 | ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದಕ್ಕೆ ಜಪ್ತಿ ಮಾಡಲಾಗಿದೆ. |

ಮೇಲ್ಕಂಡಂತೆ ಸದರಿ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿರುವ ಬಗ್ಗೆ ದಿವಂಗತ ಕೆ.ಚಂದ್ರಶೇಖರಪ್ಪ ಬಿನ್ ಕಲ್ಲಿಂಗಪ್ಪ ಮತ್ತು ಅವರ ವಾರಸುದಾರರ ಮೇಲ್ಕಾಣಿಸಿದ ಆಸ್ತಿ ದಾಖಲೆಗಳಲ್ಲಿ (ರೆಕಾರ್ಡ್ ಆಫ್ ರೈಟ್ಸ್‌ನಲ್ಲಿ) ಮುಂದಿನ ಸೂಚನೆಯವರೆಗೆ ದಾಖಲಿಸಲು ಗ್ರಾಮ ಲೆಕ್ಕಾಧಿಕಾರಿಗಳು, ಭರಮಸಾಗರ ಹೋಬಳಿ, ಭರಮಸಾಗರ, ಚಿತ್ರದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರಿಗೆ ಸೂಚಿಸಲಾಗಿದೆ.

ದಿವಂಗತ ಕೆ.ಚಂದ್ರಶೇಖರಪ್ಪ ಬಿನ್ ಕಲ್ಲಿಂಗಪ್ಪ ಇವರ ವಾರಸುದಾರರಾಗಿರುವ ಶ್ರೀಮತಿ ಎಚ್.ಕೆ.ಅನುಸೂಯಮ್ಮ ಮತ್ತು ಮಕ್ಕಳು ಇವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಪೂರ್ಣ ಬಾಕಿಯನ್ನು ಬಡ್ಡಿ ಮತ್ತು ಇತರೆ ಖರ್ಚುಗಳೊಂದಿಗೆ ದಿನಾಂಕ: 30.11.2006 ರೊಳಗಾಗಿ ಪೂರ್ಣವಾಗಿ ಪಾವತಿ ಮಾಡದೇ ಇದ್ದರೆ ಈ ನೋಟೀಸಿನ ಪ್ರಕಾರ ಜಪ್ತಿ (ಅಟ್ಯಾಚ್) ಮಾಡಲ್ಪಟ್ಟಿರುವ ಮೇಲ್ಕಂಡ ಸ್ಥಿರ ಸ್ವತ್ತುಗಳನ್ನು ಮಾರಾಟ ಮಾಡಲಾಗುವುದು.

ಈ ನೋಟೀಸ್ ಆಫ್ ಅಟ್ಯಾಚ್ಮೆಂಟನ್ನು ಈ ದಿನ ದಿನಾಂಕ: 30.10.2006 ರಂದು ಜಾರಿ ಮಾಡಲಾಗಿದೆ.

ಮಾರಾಟಾಧಿಕಾರಿಗಳು, ನಿ.441,

ಪಿ.ಡಿ. 134 ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ.

**ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ**

**ಭೂಸ್ವಾಧೀನ ಕಾಯಿದೆ 1894 ಕಲಂ 16(2)ರ ಮೇರೆಗೆ ಪ್ರಕಟಣೆ**

**ಕ್ರಮಾಂಕ: ಶಿನಪ್ರಾ/ಭೂಸ್ವಾ/ಸಿಆರ್-180/91-92, ದಿನಾಂಕ: 25ನೇ ನವೆಂಬರ್ 2006**

ಕರ್ನಾಟಕ ಸರ್ಕಾರದವರು 1963ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ (1894ರ ಸಾಲಿನ ಕೇಂದ್ರ ಅಧಿನಿಯಮ 1ರ) ಪ್ರಕರಣ 16(2)ರ ಮೇರೆಗೆ ಈ ಮೂಲಕ ಅನುಸೂಚಿಯಡಿ ಸೂಚಿಸಲಾದ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ರಚಿಸಿ, ಹಂಚಿಕೆ ಮಾಡುವ ಯೋಜನೆಗಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮ

ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರಿಗೂ ಹಾಗೂ ಸಂಬಂಧಿಸಿದವರ ತಿಳುವಳಿಕೆಗಾಗಿ ಅಧಿಸೂಚನೆ ನೀಡುವ ಮೂಲಕ ಪ್ರಕಟಿಸಲಾಗಿದೆ.

**ಜಿಲ್ಲೆ: ಶಿವಮೊಗ್ಗ ತಾಲ್ಲೂಕು: ಭದ್ರಾವತಿ ಹೋಬಳಿ: ಕಸಬ ಗ್ರಾಮ: ಭದ್ರಾವತಿ ಕಸಬ**

| ಕ್ರ.ಸಂ. | ಸ.ನಂ. | ತರಹೆ | ವಿಸ್ತೀರ್ಣ ಎ–ಗುಂ. | ಆಕಾರ ರೂ–ಪೈ. | ಸ್ವಾಧೀನಪಡೆದ ದಿನಾಂಕ |
|---|---|---|---|---|---|
| 1 | 197 | ನಾಲಾ ತರಿ | 2–32 | 22–11 | 30.01.99 |

ವಿಶೇಷ ಭೂಸ್ವಾಧೀನಾಧಿಕಾರಿಗಳು,

ಪಿ.ಡಿ. 136 ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.

**ಮಾರಾಟಾಧಿಕಾರಿಗಳು ನಿ.441, ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ, ಇವರ ನಡವಳಿಕೆಗಳು**

**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸ್**

**(ನೋಟೀಸ್ ಆಫ್ ಅಟ್ಯಾಚ್ಮೆಂಟ್)**

**1960ರ ಕ.ಸ.ಸಂಘಗಳ ನಿಯಮ 38(2)ಸಿ ರನ್ವಯ**

**ದಾವಾ ಸಂಖ್ಯೆ: 1421/2002–03, ಇ.ಪಿ.ಸಂಖ್ಯೆ: 364/2003–04**

**ಸಿಇಪಿ ಸಂಖ್ಯೆ: ಸಿಇಪಿ/ಎಆರ್ಇ/ಯುಬಿಎಫ್/1739/2005–06(ವ),**

**ದಾವಣಗೆರೆ, ದಿನಾಂಕ: 24ನೇ ನವೆಂಬರ್ 2006**

**ವಿಷಯ:** ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ಸಾಲಗಾರರಾದ ಶ್ರೀ ಟಿ.ಆರ್.ಮಂಜುನಾಥ್ ಬಿನ್ ಟಿ.ರಂಗಪ್ಪ, ಡೋರ್ ನಂ.919/2ಎ 35 ಮತ್ತು 35ಪಿ, 5ನೇ ವಾರ್ಡ್, 7ನೇ ಡಿವಿಜನ್, ಕೆ.ಬಿ.ಬಡಾವಣೆ, ದಾವಣಗೆರೆ–2 ಇವರಿಂದ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಬಾಕಿ ವಸೂಲಿಗಾಗಿ ಸಾಲಗಾರರ ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಸ್ಥಿರ ಸ್ವತ್ತುಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರನ್ವಯ ಜಪ್ತಿ (ಅಟ್ಯಾಚ್ಮೆಂಟ್) ಮಾಡುವ ಕುರಿತು.

ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಸುಸ್ತಿ ಬಾಕಿದಾರ ಸಾಲಗಾರರಾದ ಶ್ರೀ ಟಿ.ಆರ್.ಮಂಜುನಾಥ್ ಬಿನ್ ಟಿ.ರಂಗಪ್ಪ, ಡೋರ್ ನಂ.919/2ಎ 35 ಮತ್ತು 35ಪಿ, 5ನೇ ವಾರ್ಡ್, 7ನೇ ಡಿವಿಜನ್, ಕೆ.ಬಿ.ಬಡಾವಣೆ, ದಾವಣಗೆರೆ–2 ಇವರ ವಿರುದ್ಧ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ಇಲಾಖಾ ಮಧ್ಯಸ್ಥದಾರರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇವರ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಹೂಡಲಾಗಿದ್ದ ದಾವಾ ಸಂಖ್ಯೆ:1421/2002–03, ಇದರಲ್ಲಿ ದಿನಾಂಕ: 28.5.2003 ರಂದು ಆಗಿರುವ ಡಿಕ್ರಿ ಆದೇಶದ ಪ್ರಕಾರ ಹಾಗೂ ಇದರನ್ವಯ ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣ (Execution Petition)ರ ಪ್ರಕಾರ ಸದರಿಯವರ ಬ್ಯಾಂಕಿಗೆ ಅವರ ಸಾಲದ ಸಂಬಂಧ ಆಧಾರ ಮಾಡಲಾಗಿದ್ದ ಸ್ಥಿರ ಸ್ವತ್ತನ್ನು ಕಲಂ 101ಬಿ ರಡಿಯಲ್ಲಿ ವಸೂಲಾಧಿಕಾರಿಗಳವರು ಬ್ಯಾಂಕಿಗೆ ಮಾಲೀಕತ್ವವನ್ನು ದಿನಾಂಕ: 17.06.2006ರ ಆದೇಶದ ಪ್ರಕಾರ ವರ್ಗಾವಣೆ ಮಾಡಿದ್ದು, ಬ್ಯಾಂಕು ಈ ಸ್ಥಿರ ಸ್ವತ್ತನ್ನು ದಿನಾಂಕ: 25.10.2006 ರಂದು ಬಹಿರಂಗ ಹರಾಜು ಮೂಲಕ ರೂ.10,61,101–00 ಮೊತ್ತಕ್ಕೆ ಮಾರಾಟ ಮಾಡಿ, ಈ ದಿನಾಂಕಕ್ಕೆ ಬ್ಯಾಂಕಿಗೆ ಬರಬೇಕಾದ ಒಟ್ಟು ಸಾಲದ ಮೊತ್ತ ರೂ.14,75,987–00 ಗೆ ಈ ಮಾರಾಟದ ಮೊತ್ತವನ್ನು ಹೊಂದಾಣಿಕೆ ಮಾಡಿರುತ್ತದೆ. ಆದಾಗ್ಯೂ ಅವರ ಸಾಲದ ಬಾಕಿಯೂ ಪೂರ್ಣವಾಗಿ ತೀರುವಳಿಯಾಗದೇ ಸದರಿ ದಿನಾಂಕಕ್ಕೆ ರೂ.4,14,886–00 ಮೊತ್ತ ಬಾಕಿ ಉಳಿದಿರುತ್ತದೆ.

ಸಾಲಗಾರರು ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ಪಾವತಿಸಿರುವುದಿಲ್ಲ, ಡಿಕ್ರಿ ಆದೇಶದ ನಿರ್ದೇಶನದನ್ವಯ ಸದರಿಯವರಿಂದ ಮೇಲ್ಕಾಣಿಸಿದ ಸಾಲದ ಬಾಕಿಯನ್ನು ಬ್ಯಾಂಕಿಗೆ ವಸೂಲಿ ಮಾಡಿಕೊಳ್ಳಲು ಸದರಿ ಸಾಲಗಾರರ ಸ್ವಾಧೀನದಲ್ಲಿರುವ ಹಾಗೂ ಬ್ಯಾಂಕಿಗೆ ಆಧಾರವಾಗಿಲ್ಲದಿರುವ ಇತರೆ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿ ಅವುಗಳನ್ನು ಮಾರಾಟ ಮಾಡುವುದರ ಮೂಲಕ ಸಾಲದ ಬಾಕಿಯನ್ನು ವಸೂಲಿ ಮಾಡಿಕೊಳ್ಳಬೇಕಾಗಿದ್ದು, ಈ ಸಂಬಂಧ ಸಾಲಗಾರರು ಹೊಂದಿರುವ ಇತರೆ ಸ್ಥಿರ ಸ್ವತ್ತುಗಳಾಗಿರುವ ಸೈಟು ಮತ್ತು ಕೃಷಿ ಭೂಮಿಯನ್ನು ಜಪ್ತಿ ಮಾಡಬೇಕಾಗಿರುತ್ತದೆ.

ಈ ಪ್ರಕಾರವಾಗಿ ಶಿವ ಸಹಕಾರಿ ಬ್ಯಾಂಕ್ ನಿ., ದಾವಣಗೆರೆ ಇದರ ನಿ.441ರ ಮಾರಾಟಾಧಿಕಾರಿ ಎಸ್.ಎ. ಸಿದ್ದೀಖ್, ಆದ ನಾನು ದಾವಾ ನಂ.1421/02–03 ರಡಿ ಪಡೆಯಲಾದ ಇ.ಪಿ.ನಂ.364/02–03 ಸಿಇಪಿ ಸಂಖ್ಯೆ: ಸಿಇಪಿ/ಎಆರ್ಇ/ಯುಬಿಎಫ್/1739/2005–06(ವ) ರನ್ವಯ ಪಡೆಯಲಾದ ಅಮಲ್ಜಾರಿ ಅಧಿಕಾರದ ಪ್ರಕಾರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 102 ರಡಿಯಲ್ಲಿ ಸಿವಿಲ್ ಕೋರ್ಟ್‌ನ ಅಧಿಕಾರಗಳನ್ನು ಹೊಂದಿರುವ ಅನುಸಾರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38(2)(ಸಿ) ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬ್ಯಾಂಕಿನ ಸಾಲಗಾರರಾದ ಶ್ರೀ ಟಿ.ಆರ್.ಮಂಜುನಾಥ್ ಬಿನ್ ಟಿ.ರಂಗಪ್ಪ, ಡೋರ್ ನಂ.919/2ಎ 35 ಮತ್ತು 35ಪಿ, 5ನೇ ವಾರ್ಡ್, 7ನೇ ಡಿವಿಜನ್, ಕೆ.ಬಿ.ಬಡಾವಣೆ, ದಾವಣಗೆರೆ–2 ಇವರ ಈ ಕೆಳಕಾಣಿಸಿದ ಸ್ಥಿರ ಸ್ವತ್ತುಗಳನ್ನು ಮೇಲ್ಕಾಣಿಸಿದ ಅವರ ಸಾಲದ ಬಾಕಿ ವಸೂಲಿಗಾಗಿ ಈ ಮೂಲಕ ಜಪ್ತಿ (ಅಟ್ಯಾಚ್) ಮಾಡಲಾಗಿದೆ.

ಜಪ್ತಿ ಮಾಡಲಾದ ಸ್ಥಿರಾಸ್ತಿ ಷೆಡ್ಯೂಲ್

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮ | ಸ್ಥಿರಾಸ್ತಿ | ವಿಸ್ತೀರ್ಣ | ಸರ್ವೆ ನಂ. | ಷರಾ |
|---|---|---|---|---|---|---|---|---|
| 1 | ದಾವಣಗೆರೆ | ದಾವಣಗೆರೆ ಸಿಟಿ | 4ನೇ ವಾರ್ಡ್, 6ನೇ ಡಿವಿಜನ್, ರೆಗ್ಯೂಲೇಟೆಡ್ ಮಾರ್ಕೆಟ್ ಯಾರ್ಡ್ | | ಸೈಟ್ ನಂ.ಎ– 1–190 | 45X100 ಅಡಿ | | ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ ಇದಕ್ಕೆ ಜಪ್ತಿ ಮಾಡಲಾಗಿದೆ. |
| 2 | ದಾವಣಗೆರೆ | ದಾವಣಗೆರೆ | ಕಸಬಾ | ಅವರಗೆರೆ | ಕೃಷಿ ಜಮೀನು | ಎ–ಗು 0.29 | 296 ಖಾತೆ ನಂ.986 | |

ಮೇಲ್ಕಂಡಂತೆ ಸದರಿ ಸ್ಥಿರ ಸ್ವತ್ತುಗಳನ್ನು ಜಪ್ತಿ (ಅಟ್ಯಾಚ್) ಮಾಡಿರುವ ಬಗ್ಗೆ ಶ್ರೀ ಟಿ.ಆರ್.ಮಂಜುನಾಥ್ ಬಿನ್ ಟಿ.ರಂಗಪ್ಪ, ಡೋರ್ ನಂ.919/2ಎ 35 ಮತ್ತು 35ಪಿ, 5ನೇ ವಾರ್ಡ್, 7ನೇ ಡಿವಿಜನ್, ಕೆ.ಬಿ.ಬಡಾವಣೆ, ದಾವಣಗೆರೆ–2 ಇವರ ಮೇಲ್ಕಾಣಿಸಿದ ಆಸ್ತಿ ದಾಖಲೆಗಳಲ್ಲಿ (ರೆಕಾರ್ಡ್ ಆಫ್ ರೈಟ್ಸ್‌ನಲ್ಲಿ) ಮುಂದಿನ ಸೂಚನೆಯವರೆಗೆ ದಾಖಲಿಸಲು ಗ್ರಾಮ ಲೆಕ್ಕಾಧಿಕಾರಿಗಳು, ಕಸಬಾ ಹೋಬಳಿ, ದಾವಣಗೆರೆ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರಿಗೆ ಸೂಚಿಸಲಾಗಿದೆ. ಹಾಗೂ ಆಯುಕ್ತರು, ದಾವಣಗೆರೆ ನಗರಸಭೆ, ದಾವಣಗೆರೆ ಇವರನ್ನು ದಾವಣಗೆರೆ ನಗರ ವ್ಯಾಪ್ತಿಯಲ್ಲಿರುವ ಸದರಿ ಶ್ರೀ ಟಿ.ಆರ್.ಮಂಜುನಾಥ್ ಇವರ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಜಪ್ತಿ ಮಾಡಿರುವ ಬಗ್ಗೆ ಅವರ ಆಸ್ತಿ ಖಾತೆಯಲ್ಲಿ ದಾಖಲಿಸಲು ಕೋರಿದೆ.

ಶ್ರೀ ಟಿ.ಆರ್.ಮಂಜುನಾಥ್ ಬಿನ್ ಟಿ.ರಂಗಪ್ಪ, ಡೋರ್ ನಂ.919/2ಎ 35 ಮತ್ತು 35ಪಿ, 5ನೇ ವಾರ್ಡ್, 7ನೇ ಡಿವಿಜನ್, ಕೆ.ಬಿ.ಬಡಾವಣೆ, ದಾವಣಗೆರೆ–2 ಇವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬ್ಯಾಂಕಿಗೆ ಬರಬೇಕಾಗಿರುವ ಸಾಲದ ಪೂರ್ಣ ಬಾಕಿಯನ್ನು ಬಡ್ಡಿ ಮತ್ತು ಇತರೆ ಖರ್ಚುಗಳೊಂದಿಗೆ ದಿನಾಂಕ: 31.12.2006 ರೊಳಗಾಗಿ ಪೂರ್ಣವಾಗಿ ಪಾವತಿ ಮಾಡದೇ ಇದ್ದರೆ ಈ ನೋಟೀಸಿನ ಪ್ರಕಾರ ಜಪ್ತಿ (ಅಟ್ಯಾಚ್) ಮಾಡಲ್ಪಟ್ಟಿರುವ ಮೇಲ್ಕಂಡ ಸ್ಥಿರ ಸ್ವತ್ತುಗಳನ್ನು ಮಾರಾಟ ಮಾಡಲಾಗುವುದು.

ಈ ನೋಟೀಸ್ ಆಫ್ ಅಟ್ಯಾಚ್ಮೆಂಟನ್ನು ಈ ದಿನ ದಿನಾಂಕ: 24.11.2006 ರಂದು ಜಾರಿ ಮಾಡಲಾಗಿದೆ.

ಮಾರಾಟಾಧಿಕಾರಿಗಳು, ನಿ.441,

ಪಿ.ಡಿ. 135 ಶಿವ ಸಹಕಾರಿ ಬ್ಯಾಂಕ್ ನಿಯಮಿತ, ದಾವಣಗೆರೆ.

**THE COMPANIES ACT, 1956**

**HEYANITA SOFTWARE PVT. LTD.**

**Regd. Off: No.187, 12th Cross, 3rd Main, RMV II Stage, Bangalore-560094**

**Members Voluntary Winding up**

**Notice/Publication of Resolution**

The Special Resolution to bring the Company to Members Voluntary Liquidation, was considered, discussed and passed unanimously.

"RESOLVED the pursuant to the provisions of section 484(1)(b) consent of the Shareholders be and is hereby given for Winding up of the Company.

RESOLVED FURTHER that Sri Venkatesh Subramanian be and is hereby appointed as liquidator of the Company pursuant to Section 490 of the Companies Act, 1956 for the purpose of winding up of the affairs of the Company.

RESOLVED FURTHER that Sri Venkatesh Subramanian the liquidator be and is hereby empowered to exercise all powers under section 512 read with section 457 of the Companies Act, 1956 for the purpose of such winding-up and that the liquidator shall have the absolute power to divide and/or distribute amongst the members of the Company, in specie or in kind the assets, if any, left with the Company in accordance with Table A of Schedule I of the Companies Act, 1956."

Bangalore For Heyanita Software Pvt. Ltd.

15.12.2006 Director.

**FORM NO.151**

[See Rule 315]

**Members Voluntary Winding Up**

**Notice of Appointment of Liquidator pursuant to Section 516**

| | | |
|---|---|---|
| Name of the Company | : | Heyanita Software Private Limited |
| Nature of Business | : | Information Technology, ITES, Software Development |
| Address of Registered Office | : | No.187, 12th Cross, 3rd Main, RMV II Stage, Bangalore-560094 |

Names and Address of Liquidator : Venkatesh Subramanian
No.187, 12th Cross, 3rd Main, RMV II Stage,
Bangalore-560 094.
Date of Appointment : 15th December, 2006
By whom appointed : By Special Resolution passed by the Members at the Extra-Ordinary General Meeting.

Bangalore
15.12.2006
P.D.132

LIQUIDATOR
VENKATESH SUBRAMANIAN

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–103/2006 ಎಫ್, ದಿನಾಂಕ: 27ನೇ ಅಕ್ಟೋಬರ್ 2006**

**ಅರ್ಜಿದಾರರು:**

1. ಶ್ರೀಮತಿ ಕೋಕಿಲ ಕೋಂ ಶಂಕರನಾಯ್ಕ
ಯಾನೆ ಗುರು, 19 ವರ್ಷ,
ವಾಸ: ಲಂಬಾಣಿಕಟ್ಟೆ, ಮದಕರಿಪುರ,
ಚಿತ್ರದುರ್ಗ ತಾಲ್ಲೂಕು.

**ಪ್ರತಿವಾದಿಗಳು:**

1. ಮೆ: ಯನ್.ಯಸ್.ನಾಯಕ್ ಅಂಡ್ ಸನ್ಸ್
ಪ್ಲಾಂಟ್ ನಂ.8. ಇನ್‌ಕಮ್‌ಟ್ಯಾಕ್ಸ್ ರಸ್ತೆ, ವಿದ್ಯಾನಗರ,
ಹುಬ್ಬಳ್ಳಿ.
2. ಮೆ: ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ.,
ಹುಬ್ಬಳ್ಳಿ–580023.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಕೋಕಿಲ ಇವರು ತಮ್ಮ ಗಂಡನಾದ ಶ್ರೀ ದಿ. ಶಂಕರನಾಯ್ಕ ಯಾನೆ ಗುರು ಇವರು 1ನೇ ಪ್ರತಿವಾದಿಗಳಾದ ಮೆ: ಯನ್.ಯಸ್. ನಾಯಕ್ ಅಂಡ್ ಸನ್ಸ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 22.02.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 1574

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು**

**ಕ್ರ.ಸಂ. ಎ.ಆರ್./ಎಬಿಎನ್/ದಾವಾ/39/2006–07, ದಿನಾಂಕ: 31ನೇ ಅಕ್ಟೋಬರ್ 2006**

**ವಿಷಯ:** ಹೊನ್ನಾಳಿ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಹೊನ್ನಾಳಿ, ಹೊನ್ನಾಳಿ ತಾಲ್ಲೂಕು ದಾವಣಗೆರೆ ಜಿಲ್ಲೆ ಇದರ ತೀರ್ಪು ಬಾಕಿದಾರರಾದ ಶ್ರೀ ಎಸ್. ಗಣೇಶಪ್ಪ ಬಿನ್ ಶುಂಠಿ ಕೊಟ್ರಪ್ಪ ಬೆನಕನಹಳ್ಳಿ ಗ್ರಾಮ ಹೊನ್ನಾಳಿ ತಾಲ್ಲೂಕು ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಸೊಸೈಟಿಯ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಅಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ 74/2003–04, ದಿನಾಂಕ: 07.10.2003
2) ಅಮಲ್ಜಾರಿ ಪ್ರಕರಣ ಸಂಖ್ಯೆ 625/2003–04
3) ಮಾರಾಟಾಧಿಕಾರಿಗಳ ಪತ್ರ ಸಂಖ್ಯೆ... ದಿನಾಂಕ: 14.08.06.
4) ಸೊಸೈಟಿಯ ಆಡಳಿತ ಮಂಡಳಿ ಸಭೆಯ ತೀರ್ಮಾನ ದಿನಾಂಕ: 20.07.2006

**ಪ್ರಸ್ತಾವನೆ:**

ಹೊನ್ನಾಳಿ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಹೊನ್ನಾಳಿ, ಹೊನ್ನಾಳಿ ತಾಲ್ಲೂಕು ದಾವಣಗೆರೆ ಜಿಲ್ಲೆ. ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಸೊಸೈಟಿಯ ಸಾಲಗಾರರಾದ ಶ್ರೀ ಎಸ್. ಗಣೇಶಪ್ಪ ಬಿನ್ ಶುಂಠಿ ಕೊಟ್ರಪ್ಪ ಬೆನಕನಹಳ್ಳಿ ಗ್ರಾಮ, ಹೊನ್ನಾಳಿ ತಾಲ್ಲೂಕು, ಸದರಿ ಗ್ರಾಮದ ಮುಖ್ಯ ರಸ್ತೆಯಲ್ಲಿರುವ ವಾಸದ ಮನೆಯ ಮತ್ತು ಜಾಗದ ಖಾನೆ ಸುಮಾರಿ ನಂ.250ಎ, 250ಬಿ, ಜಂಜರು ನಂ.249/1, ಅಳತೆ ಪೂ–ಪ–50 ಅಡಿ, ಉ–ದ–18 ಅಡಿಯ ಮನೆಯನ್ನು ಮತ್ತು ಜಾಗವನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವು ಸುಸ್ತಿಯಾಗಿರುವುದರಿಂದ ಸಂಘದವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ

ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 74/2003–04, ದಿನಾಂಕ: 07.10.2003 ರಂದು ಸಾಲ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ದಿನಾಂಕ: 18.10.2002ಕ್ಕೆ ಒಟ್ಟು ರೂ.97,218=00 ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 625/2003–04ನ್ನು ಕಲಂ 101 ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಸೊಸೈಟಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಸೊಸೈಟಿಗೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮ ಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ: 20.06.2005, ದಿನಾಂಕ: 24.07.2006 ರಂದು ಸೊಸೈಟಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಮೊದಲನೆ ದಿನಾಂಕದ ಹರಾಜಿಗೆ ಶ್ರೇಷ್ಠ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಿದ್ದು ತದನಂತರ ಅದು ವಜಾ ಆಗಿರುತ್ತದೆ. ನಂತರದ ದಿನಾಂಕದಂದು ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಯಾರೂ ಭಾಗವಹಿಸಿರುವುದಿಲ್ಲದ ಪ್ರಯುಕ್ತ ಸದರಿ ಆಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ನಿಯಮ 38(2)ರ ಪ್ರಕಾರ ಮಾರಾಟವಾಗದ ಆಸ್ತಿ ಎಂದು ತೀರ್ಮಾನಿಸಿ, ಸೊಸೈಟಿಯ ಕಾರ್ಯಕಾರಿ ಮಂಡಳಿಯ ತೀರ್ಮಾನದಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಪ್ರಕಾರ ಈ ಕೆಳಕಂಡ ಆಸ್ತಿಯನ್ನು ಸೊಸೈಟಿಯ ಹೆಸರಿಗೆ ರೂ.1,81,072=00 (ಒಂದು ಲಕ್ಷದ ಎಂಬತ್ತೊಂದು ಸಾವಿರದ ಎಪ್ಪತ್ತೆರೆಡು ರೂಪಾಯಿಗಳು) ಗಳಿಗೆ ವರ್ಗಾಯಿಸಲು ತೀರ್ಮಾನಿಸಿ, ಮಾರಾಟಾಧಿಕಾರಿಗಳು ಹರಾಜು ನಡವಳಿಕೆಯಲ್ಲಿ ದಾಖಲಿಸಿ ಸೊಸೈಟಿಯ ಹೆಸರಿಗೆ ಸ್ಥಿರಾಸ್ತಿಯನ್ನು ವರ್ಗಾಯಿಸಿಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ, ಈ ಬಗ್ಗೆ ಕಾಯ್ದೆ ಅನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗೊಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲ್ಗೊಳ್ಳದೇ ಇರುವ ಪ್ರಯುಕ್ತ ಹಾಗೂ ಸೊಸೈಟಿ ಈ ಸ್ಥಿರಾಸ್ತಿಯನ್ನು ಸಾಲದ ಬಾಕಿ ಮೊತ್ತಕ್ಕೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಹಾಗೂ ಮಾರಾಟಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರಿಗೆ ಈ ಕೆಳಕಂಡ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ರಡಿಯಲ್ಲಿ ಸೊಸೈಟಿಯ ಹೆಸರಿಗೆ ವರ್ಗಾಯಿಸಲು ಈ ಕೆಳಕಂಡ ಆದೇಶ ಮಾಡಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್ಎಂ/96, ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಬಿ.ಟಿ.ಜಯರಾಮಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾತಾಧಿಕಾರಿ ಆದ ನಾನು ಹೊನ್ನಾಳಿ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಹೊನ್ನಾಳಿ, ಇದರ ದಾವಾ ಸಂಖ್ಯೆ: 74/2003–04, ದಿನಾಂಕ: 07.10.2003 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ:625/2003–04ರ ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀ ಎಸ್. ಗಣೇಶಪ್ಪ ಬಿನ್ ಶುಂಠಿ ಕೊಟ್ರೆಪ್ಪ ಬೆನಕನಹಳ್ಳಿ ಗ್ರಾಮ ಇವರು ಸೊಸೈಟಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ಬೆನಕನಹಳ್ಳಿ ಗ್ರಾಮದ ಮುಖ್ಯ ರಸ್ತೆಯಲ್ಲಿರುವ ವಾಸದ ಮನೆಯ ಮತ್ತು ಜಾಗದ ಖಾನೆ ಸುಮಾರಿ ನಂ.250ಎ, 250ಬಿ, ಜಂಜರು ನಂ.249/1, ಅಳತೆ ಪೂ–ಪ–50 ಅಡಿ, ಉ–ದ–18 ಅಡಿಯ ಮನೆಯನ್ನು ರೂ.1,81,072=00 (ಒಂದು ಲಕ್ಷದ ಎಂಬತ್ತೊಂದು ಸಾವಿರದ ಎಪ್ಪತ್ತೆರಡು ರೂಪಾಯಿಗಳು) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಸೊಸೈಟಿಗೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸೊತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ–8ನ್ನು ಪ್ರತ್ಯೇಕವಾಗಿ ಲಗತ್ತಿಸಿದೆ ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಸೊಸೈಟಿ ತನ್ನ ಹೆಸರಿಗೆ ವರ್ಗಾಯಿಸಿಕೊಂಡು ತೀರ್ಪು ಬಾಕಿದಾರರಿಂದ ಸೊಸೈಟಿಗೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸೊತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ–ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

**ಆಸ್ತಿಯ ವಿವರ**

ಬೆನಕನಹಳ್ಳಿ ಗ್ರಾಮದ ಮುಖ್ಯರಸ್ತೆಯಲ್ಲಿರುವ ವಾಸದ ಮನೆ ಮತ್ತು ಜಾಗ ಖಾನೆ ಸುಮಾರಿ ನಂ.250ಎ, 250ಬಿ, ಜಂಜರು ನಂ.249/1 ಅಳತೆ ಪೂ–ಪ–50 ಅಡಿ, ಉ–ದ–18 ಅಡಿ. ಇದರ ಚಕ್ಕುಬಂದಿ ಪೂರ್ವಕ್ಕೆ ಕೋಟೆಹಾಳ್ ಬೆನಕಪ್ಪನವರ ಮನೆ, ಪಶ್ಚಿಮಕ್ಕೆ ಚನ್ನಬಸಪ್ಪನವರ ಮನೆ, ಉತ್ತರಕ್ಕೆ ಗ್ರಾಮ ಪಂಚಾಯ್ತಿ ರಸ್ತೆ, ದಕ್ಷಿಣಕ್ಕೆ ಬಿ.ಗಂಗಾಧರಪ್ಪ ಇವರ ಮನೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31.10.06 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಾಧಿಕಾರಿಗಳು, ದಾವಣಗೆರೆ ಉಪವಿಭಾಗ, ದಾವಣಗೆರೆ**

**ನಮೂನೆ–8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 38ಎ ಇದರ ರೀತ್ಯ)**

ಹೊನ್ನಾಳಿ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಹೊನ್ನಾಳಿ, ಹೊನ್ನಾಳಿ ತಾಲ್ಲೂಕು ದಾವಣಗೆರೆ ಜಿಲ್ಲೆ, ಇದರ ಕಾರ್ಯದರ್ಶಿಯವರು, ಶ್ರೀ ಎಸ್.ಗಣೇಶಪ್ಪ ಬಿನ್ ಶುಂಠಿ ಕೊಟ್ರೆಪ್ಪ ಬೆನಕನಹಳ್ಳಿ ಗ್ರಾಮ, ಹೊನ್ನಾಳಿ

ತಾಲ್ಲೂಕು, ಇವರಿಂದ ಸೊಸೈಟಿಗೆ ಬರಬೇಕಾದ ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ದಾವಾ ಸಂಖ್ಯೆ: 74/2003–04 ರಲ್ಲಿ ಸದರಿಯವರಿಂದ ಸೊಸೈಟಿಗೆ ಆಧಾರ ಮಾಡಿರುವ ಈ ಸರ್ಟಿಫಿಕೇಟ್‌ನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಿ ಕಲಂ 101 ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 20.06.2005 ಮತ್ತು ದಿ: 24.07.2006 ರಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಮೊದಲನೆ ದಿನಾಂಕದ ಹರಾಜಿಗೆ ರಾಜ್ಯ ಶ್ರೇಷ್ಠ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಿದ್ದು ತದನಂತರ ಅದು ವಜಾ ಆಗಿರುತ್ತದೆ. ನಂತರದ ದಿನಾಂಕದಂದು ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲದ ಕಾರಣ ಸದರಿ ಸೊತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 74/2003–04 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಸೊಸೈಟಿಗೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಸೊಸೈಟಿಯ ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಸಾಲದ ಬಾಕಿ ರೂ.1,81,072=00 (ಒಂದು ಲಕ್ಷದ ಎಂಬತ್ತೊಂದು ಸಾವಿರದ ಎಪ್ಪತ್ತೆರಡು ರೂಪಾಯಿಗಳು) ಮೊತ್ತಕ್ಕೆ ಸೊಸೈಟಿಯ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಹೊನ್ನಾಳಿ ಅರ್ಬನ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಹೊನ್ನಾಳಿ, ಹೊನ್ನಾಳಿ ತಾಲ್ಲೂಕು ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳಿಗೆ ಒಳಪಟ್ಟು ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿಯ ವಿವರ | ಅಳತೆ | ಸಾಲ ತೆಗೆದು ಕೊಂಡಿರುವ ಸಾಮ್ಯ ಹಕ್ಕುಭಾದ್ಯತೆ | ಮಾರುಕಟ್ಟೆ ಮೌಲ್ಯ | ಸೊತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ಬೆನಕನಹಳ್ಳಿ | ಬೆನಕನಹಳ್ಳಿ ಗ್ರಾಮದ ಮುಖ್ಯ ರಸ್ತೆಯಲ್ಲಿರುವ ವಾಸದ ಮನೆ ಮತ್ತು ಜಾಗ ಖಾನೆ ಸುಮಾರಿ ನಂ.250ಎ, 250ಬಿ, ಜಂಜರು ನಂ.249/1 | ಪೂ–ಪ 50 ಅಡಿ ಉ–ದ 18 ಅಡಿ | ಸ್ವಂತ ಸ್ವಾಧೀನ | ರೂ. ಎರಡು ಲಕ್ಷದ ಎರಡು ಸಾವಿರ | ಅಸಲು ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.1,81,072=00 (ದಿ: 24.07.2006ಕ್ಕೆ ಇದ್ದಂತೆ) |

**ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಕಂಡಂತಿರುತ್ತದೆ**

ಪೂರ್ವಕ್ಕೆ ಕೋಟೆಹಾಳ್ ಬೆನಕಪ್ಪನವರ ಮನೆ, ಪಶ್ಚಿಮಕ್ಕೆ ಚನ್ನಬಸಪ್ಪನವರ ಮನೆ, ಉತ್ತರಕ್ಕೆ ಗ್ರಾಮ ಪಂಚಾಯ್ತಿ ರಸ್ತೆ, ದಕ್ಷಿಣಕ್ಕೆ ಬಿ.ಗಂಗಾಧರಪ್ಪ ಇವರ ಮನೆ.

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಸೊಸೈಟಿಯ ಹೆಸರಿಗೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಸೊಸೈಟಿಗೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮಾ–ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು ಸೊಸೈಟಿಗೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.
2. ಸೊಸೈಟಿ ಹೆಸರಿಗೆ ವರ್ಗಾವಣೆ ಮಾಡಲಾಗಿರುವ ಸ್ಥಿರಾಸ್ತಿಯು ಸೊಸೈಟಿಯ ಸ್ವಾಧೀನ, ಹಕ್ಕು ಭಾದ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.
3. ಸೊಸೈಟಿಯ ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆ ನೀಡತಕ್ಕದ್ದು.
5. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಸೊಸೈಟಿಯು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
6. ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಸೊಸೈಟಿಯು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಈ ಸರ್ಟಿಫಿಕೇಟನ್ನು ದಿನಾಂಕ: 31.10.06 ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿ.ಆರ್. 1573

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**
**ಸಂ:ಎ3(ಬಿ1) ಅಮೊ:ಶ್ರೀಗಂಧ/ಮಾರುತಿಕಾರು/18/99–2000, ದಿನಾಂಕ: 29ನೇ ಸೆಪ್ಟೆಂಬರ್ 2006**

**ಉಪಸ್ಥಿತರು:** ಶ್ರೀ ಜಿ.ಎ.ಎನ್. ಕರ್ಕಿಕರ್
ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ,
ಸಕ್ರೆಬೈಲ್ ವನ್ಯಜೀವಿ ವಲಯ ಗಾಜನೂರು
(ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು:** ಶ್ರೀಮತಿ ಅಬೀದಾ ಬೇಗಂ ಕೋಂ ಜಾವೀದ್ ಅಹಮ್ಮದ್,
ಖಾಜೀ ಮೊಹಲ್ಲಾ, ಚೆನ್ನಗಿರಿ, **ದಾವಣಗೆರೆ ಜಿಲ್ಲೆ.**

**ಪ್ರಕರಣದ ಹಿನ್ನೆಲೆ:**

ಗಾಜನೂರು ಅರಣ್ಯ ತನಿಖಾ ಠಾಣೆಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಕ್ರೆಬೈಲ್ ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ದಿನಾಂಕ: 27.04.1999 ರಂದು ಬೆಳಿಗ್ಗೆ ಶಿವಮೊಗ್ಗ – ತೀರ್ಥಹಳ್ಳಿ ರಸ್ತೆಯ ಮಿಲಿಟರಿ ಕ್ಯಾಂಪ್ ಹತ್ತಿರ ಜೀಪನ್ನು ಮರೆಯಾಗಿ ನಿಲ್ಲಿಸಿ ಕಾಯುತ್ತಿರುವಾಗ ಸುಮಾರು 8–30ರ ಸಮಯದಲ್ಲಿ ತೀರ್ಥಹಳ್ಳಿ ಕಡೆಯಿಂದ ಶಿವಮೊಗ್ಗ ಕಡೆಗೆ ಹೋಗಲು ಬರುತ್ತಿದ್ದ ಬಿಳಿ ಬಣ್ಣದ ಮಾರುತಿ ಕಾರನ್ನು ನಿಲ್ಲಿಸಲು ಸೂಚಿಸಿದಾಗ ಕಾರಿನಲ್ಲಿದ್ದವರು ನಿಲ್ಲಿಸಲು ಸೂಚಿಸಿದ ಸ್ಥಳದಿಂದ ಸ್ವಲ್ಪ ದೂರದ ಮುಂದೆ ಕಾರನ್ನು ನಿಲ್ಲಿಸಿ ಕಾಡಿನೊಳಗೆ ಓಡಲು ಪ್ರಾರಂಭಿಸಿದರು. ತಕ್ಷಣ ಕಾರ್ಯಪ್ರವೃತ್ತರಾದ ಸಿಬ್ಬಂದಿಗಳು ಅವರನ್ನು ಬೆನ್ನಟ್ಟಿದಾಗ ಎರಡು ಜನರಿದ್ದ ಅಸಾಮಿಗಳಲ್ಲಿ ಒಬ್ಬರನ್ನು ಬಂಧಿಸಲು ಯಶಸ್ವಿಯಾಗಿದ್ದು ಇನ್ನೊಬ್ಬ ಪರಾರಿಯಾಗಿರುತ್ತಾನೆ. ಬಂಧಿತ ಅಸಾಮಿಯನ್ನು ಕಾರು ಸಂಖ್ಯೆ: ಎಂ.ಜಿ.ಆರ್–4206ರ ಹತ್ತಿರ ಕರೆತಂದು ಕೂಲಂಕುಷವಾಗಿ ಪರಿಶೀಲಿಸಿದಾಗ ಕಾರಿನಲ್ಲಿ ತುಂಡುಗಳಿರುವುದು ಕಂಡು ಬಂದ ಮೇರೆಗೆ ಸದರಿ ತುಂಡುಗಳನ್ನು ಪರಿಶೀಲಿಸಿ ನೋಡಲಾಗಿ ಇವುಗಳು ಶ್ರೀಗಂಧದ ತುಂಡುಗಳಾಗಿದ್ದು ಇವುಗಳ ಮೇಲೆ ಯಾವುದೇ ರೀತಿಯ ಇಲಾಖಾ ಛಾಪಾ ಇಲ್ಲದಿರುವುದು ಕಂಡು ಬಂದಾಗ (84 ತುಂಡುಗಳು=81 ಕೆ.ಜಿ. ಮತ್ತು ಚೆಕ್ಕೆ 6 ಕೆ.ಜಿ. ಒಟ್ಟು–87 ಕೆ.ಜಿ.) ಬಂಧಿತ ಅಸಾಮಿಯನ್ನು ವಿಚಾರ ಮಾಡಿದ್ದು, ಇವುಗಳ ಸಾಗಾಣಿಕೆಗೆ ರಹದಾರಿ ಇರುವುದಿಲ್ಲ, ಇವುಗಳನ್ನು ಅರಣ್ಯದಿಂದ ತಂದಿರುವುದಾಗಿ ತಿಳಿಸಿದ ಮೇರೆಗೆ ಅಕ್ರಮ ಸಾಗಾಣಿಕೆ ಮಾಡುತ್ತಿರುವುದು ಖಚಿತವಾದ ನಂತರ ಕಾರು ಮತ್ತು ಶ್ರೀಗಂಧದ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸ್ಥಳದಲ್ಲೇ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 18/99–2000 ದಿನಾಂಕ: 27.04.1999 ನ್ನು ದಾಖಲಿಸಿರುತ್ತಾರೆ. ದಸ್ತಗಿರಿ ಮಾಡಿದ ಅಸಾಮಿಯನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುತ್ತಾರೆ. ತದನಂತರ ಅಮಾನತ್ತು ಪಡಿಸಿದ ಕಾರು ಮತ್ತು ಶ್ರೀಗಂಧವನ್ನು 71(ಎ) ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮಕ್ಷಮ ಹಾಜರ್ ಪಡಿಸಿದ ಮೇರೆಗೆ ಈ ಪ್ರಾಧಿಕಾರವು ವಲಯ ಅರಣ್ಯಾಧಿಕಾರಿ ಸಕ್ರೆಬೈಲ್ ವನ್ಯಜೀವಿ ವಲಯ ಗಾಜನೂರು ಇವರಿಗೆ ಮುಂದಿನ ಆದೇಶದ ವರೆಗೆ ಸದರಿ ವಾಹನ ಹಾಗೂ ಶ್ರೀಗಂಧವನ್ನು ಸುರಕ್ಷಿತವಾಗಿ ಇಟ್ಟುಕೊಳ್ಳಲು ಆದೇಶಿಸಿರುತ್ತದೆ.

ಈ ಸಂಬಂಧ ವಾಹನದ ವಿಚಾರಣಾ ಕಾಲಕ್ಕೆ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಈ ಪ್ರಾಧಿಕಾರದಿಂದ ಸಾರಿಗೆ ಆಯುಕ್ತರು (ಸೆಂಟ್ರಲ್) ಬಾಂಬೆ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಠಾಣೆ ವಿಭಾಗ, ಠಾಣೆ ಇವರಿಗೆ ಪತ್ರ ವ್ಯವಹರಿಸಿರುತ್ತದೆ. ಅಲ್ಲದೆ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಬಿ) ಪ್ರಕಾರ 30 ದಿವಸಗಳ ಕಾಲವಕಾಶವನ್ನು ಕೊಟ್ಟು ವಾಹನದ ಮೂಲ ವಾರಸುದಾರರು / ಮಾಲೀಕರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ರುಜುವಾತು ಪಡಿಸುವ ಸಲುವಾಗಿ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವಂತೆ ಸಾರ್ವಜನಿಕರಿಗೆ ತಿಳಿಪಡಿಸುವ ಪ್ರಕಟಣೆಯನ್ನು ದಿನಾಂಕ: 11.08.1999ರ ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಿಸಲಾಗಿರುತ್ತದೆ.

ನಂತರ ಶ್ರೀಮತಿ ಅಬೀದಾ ಬೇಗಂ, ಖಾಜಿ ಮೊಹಲ್ಲಾ, ಚೆನ್ನಗಿರಿ ಇವರು ಎಂ.ಜಿ.ಆರ್. 4206ರ ಮೂಲ ಮಾಲೀಕರೆಂದು ಹೇಳಿಕೊಂಡು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ದಿನಾಂಕ: 20.07.1999 ರಂದು ಅರ್ಜಿ ಸಲ್ಲಿಸಿದ್ದು ಸದರಿ ಅರ್ಜಿಗೆ ಪ್ರತಿಯಾಗಿ ಮೇಲೆ ಶ್ರೀಮತಿ ಅಬೀದಾ ಬೇಗಂ ಇವರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳುವ ನೋಟೀಸನ್ನು ದಿನಾಂಕ: 27.12.1999 ರಂದು ಜಾರಿ ಮಾಡಲಾಗಿರುತ್ತದೆ. ಸದರಿಯವರು ದಿನಾಂಕ: 05.01.2000 ರಂದು ಉತ್ತರವನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದ ಅಂತಿಮ ಆದೇಶ ಹೊರಡಿಸಲು ದಿನಾಂಕ: 28.06.2000 ರಿಂದ 22.07.2006ರ ವರೆಗೆ ವಿಚಾರಣೆಯನ್ನು ನಡೆಸಿರುತ್ತದೆ. ಅಭಿಯೋಜನಾ ವತಿಯಿಂದ ಶ್ರೀ ಶಿವಯ್ಯ, ವಲಯ ಅರಣ್ಯಾಧಿಕಾರಿ ಇವರನ್ನು ದಿನಾಂಕ: 27.08.2005 ಮತ್ತು 19.11.2005 ರಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು. ಪ್ರತಿವಾದಿಯ ಪರ ಯಾವುದೇ ಸಾಕ್ಷಿಗಳನ್ನು ಹಾಜರು ಪಡಿಸಿರುವುದಿಲ್ಲ ಹಾಗೂ ಈ ನ್ಯಾಯಾಲಯದಿಂದ ನಿಗದಿಪಡಿಸಿದ ದಿನಾಂಕಗಳಾದ 06.03.2004, 27.03.2004, 22.05.2004, 03.07.2004, 31.07.2004, 17.12.2005, 25.02.2006, 18.03.2006, 22.07.2006 ರಂದು ವಿಚಾರಣೆಗೆ ಹಾಜರಾಗುವಂತೆ ತಿಳಿಸಿದಾಗ್ಯೂ ಕೂಡ ಅರ್ಜಿದಾರರಾಗಲೀ ಅವರ ಪರ ವಕೀಲರಾಗಲೀ ಹಾಜರಾಗದೆ ಗೈರು ಹಾಜರಾಗಿರುತ್ತಾರೆ.

ಪ್ರಾಧಿಕಾರದಲ್ಲಿ ಹಾಜರು ಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣದ ವಾಸ್ತವಂಶ ಮತ್ತು ಲಭ್ಯವಿದ್ದ ದಾಖಲೆಗಳನ್ನು ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಕಂಡಂತಿವೆ.

1. ಅರ್ಜಿದಾರರು ಮಾರುತಿ ಕಾರು ಸಂಖ್ಯೆ: ಎಂ.ಜಿ.ಆರ್. 4206 ರಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳನ್ನು ಕಾನೂನಿನ ವಿರುದ್ಧವಾಗಿ ಸಾಗಿಸುತ್ತಿದ್ದರೆಂದು ಅಭಿಯೋಗವು ಸಿದ್ದಪಡಿಸುವುದೆ?
2. ಕರ್ನಾಟಕ ಅರಣ್ಯ ಕಾಯಿದೆ 71(ಬಿ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟೀಸನ್ನು ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶ ನೀಡಲಾಗಿದೆಯೇ?
3. ವಾಹನ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿ ನಿಧಿಗಳು ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ಮಾಲೀಕರ ಪ್ರತಿ ನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿ ನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದಾರೆಯೇ?

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಇಲ್ಲ ಎಂತಲೂ

ಈ ಕೆಳಕಂಡ ಕಾರಣಗಳಿಂದ ತೀರ್ಮಾನಕ್ಕೆ ಬರಬಹುದಾಗಿದೆ.

**ಕಾರಣಗಳು:**

**ಅಂಶ–1:**

ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 27.08.2005 ಮತ್ತು 19.11.2005 ರಂದು ಈ ಪ್ರಾಧಿಕಾರದ ಮುಂದೆ ಅಭಿಯೋಜನಾ ಪರ ಸಾಕ್ಷಿಯಾದ ಶ್ರೀ ಶಿವಯ್ಯ, ವಲಯ ಅರಣ್ಯಾಧಿಕಾರಿಯವರು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ತಮ್ಮ ಸಾಕ್ಷ್ಯದಲ್ಲಿ 1998 ರಿಂದ 2001ನೇ ಇಸವಿ ವರೆಗೆ ವಲಯ ಅರಣ್ಯಾಧಿಕಾರಿಯಾಗಿ ಸಕ್ರೆಬೈಲ್ ವನ್ಯಜೀವಿ ವಲಯ ಗಾಜನೂರಿನಲ್ಲಿ ಕೆಲಸ ಮಾಡಿದ್ದು ದಿನಾಂಕ: 27.04.1999 ರಂದು ಬಂದ ಖಚಿತ ವರ್ತಮಾನದ ಮೇರೆಗೆ ನಾನು ಮತ್ತು ನನ್ನ ಸಿಬ್ಬಂದಿಗಳು ಸರ್ಕಾರಿ ಜೀಪಿನಲ್ಲಿ ಗಾಜನೂರು–ತೀರ್ಥಹಳ್ಳಿ ಪಿ.ಡಬ್ಲ್ಯೂ.ಡಿ. ರಸ್ತೆಯ ಮಿಲಿಟರಿ ಕ್ಯಾಂಪಿನ ಬಳಿ ಕಾಯುತ್ತಿರುವಾಗ ಬೆಳಿಗ್ಗೆ ಸುಮಾರು 8–30ರ ಸಮಯದಲ್ಲಿ ತೀರ್ಥಹಳ್ಳಿ ಕಡೆಯಿಂದ ಒಂದು ಬಿಳಿ ಮಾರುತಿ ಕಾರು ಬರುತ್ತಿರುವುದು ಕಂಡು ಸಮವಸ್ತ್ರಧಾರಿಗಳಾದ ನಾವುಗಳು ಕಾರನ್ನು ನಿಲ್ಲಿಸಲು ಸೂಚಿಸಿದಾಗ ನಮ್ಮಿಂದ ಸುಮಾರು 100 ಮೀಟರ್ ದೂರದಲ್ಲಿ ಕಾರನ್ನು ನಿಲ್ಲಿಸಿ ಇಬ್ಬರು ವ್ಯಕ್ತಿಗಳು ಕಾಡಿನೊಳಗೆ ಓಡಲು ಪ್ರಾರಂಭಿಸಿದಾಗ ನಮ್ಮ ಸಿಬ್ಬಂದಿಯವರ ಪೈಕಿ ಅರಣ್ಯ ರಕ್ಷಕರಾದ ಶ್ರೀ ತಿಪ್ಪೇಸ್ವಾಮಿಯವರು ಒಬ್ಬ ಆಸಾಮಿಯನ್ನು ಹಿಡಿಯಲು ಯಶಸ್ವಿಯಾದರು. ಇನ್ನೊಬ್ಬ ವ್ಯಕ್ತಿ ತಪ್ಪಿಸಿಕೊಂಡಿದ್ದಾರೆಂದು ತಿಳಿಸಿದರು. ನಂತರ ಬಂಧಿತ ಅಸಾಮಿಯನ್ನು ಕಾರಿನ ಹತ್ತಿರ ತಂದು ಕೂಲಂಕುಷವಾಗಿ ಪರಿಶೀಲನೆ ಮಾಡಿದಾಗ ಕಾರಿನಲ್ಲಿ ಶ್ರೀಗಂಧದ ತುಂಡುಗಳು ಇರುವುದು ಕಂಡು ಬಂದಿತು. ಬಂಧಿತ ಅಸಾಮಿಯ ಹೆಸರನ್ನು ಕೇಳಲಾಗಿ ಶ್ರೀ ರಾಮನಾಯ್ಕ ಬಿನ್ ಹಾಲಾನಾಯ್ಕ, ಹೊಸಕೊಪ್ಪ ಗ್ರಾಮ ಎಂದು ತಿಳಿಸಿದನು. ಕಾರನ್ನು ಹಿಡಿದ ಜಾಗದಿಂದ ಸುಮಾರು 10 ಕಿ.ಮೀ. ದೂರದವರೆಗೆ ಯಾವುದೇ ಹಳ್ಳಿ ಅಥವಾ ಮನೆಗಳು ಇರದೆ ಇದ್ದುದರಿಂದ ಸ್ಥಳದಲ್ಲಿದ್ದ ಸಿಬ್ಬಂದಿಗಳನ್ನೇ ಪಂಚರನ್ನಾಗಿ ಮಾಡಿಕೊಂಡು ಮಹಜರ್ ಕ್ರಮ ಜರುಗಿಸಲಾಯಿತು. ಮತ್ತು ಶ್ರೀಗಂಧದ ತುಂಡುಗಳನ್ನು ಎಣಿಕೆ ಮಾಡಿ ನೋಡಲಾಗಿ 84 ತುಂಡುಗಳಿದ್ದವು ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾ ಗುರುತುಗಳಿರಲಿಲ್ಲ, ಸದರಿ ತುಂಡುಗಳ ಜೊತೆಗೆ ಇದ್ದ ಪ್ಲಾಸ್ಟಿಕ್ ಚೀಲವನ್ನು ಬಿಚ್ಚಿ ನೋಡಲಾಗಿ ಅದರ ಒಳಗೆ ಶ್ರೀಗಂಧದ ಚೆಕ್ಕೆಗಳು ಇರುವುದು ಕಂಡು ಬಂದಿತು. ಇವುಗಳ ಬಗ್ಗೆ ಯಾವುದೇ ರಹದಾರಿ ಪತ್ರ ಇದೆಯೇ ಎಂದು ಆರೋಪಿತ ರಾಮನಾಯ್ಕರನ್ನು ಕೇಳಲಾಗಿ ಆರೋಪಿತ ರಾಮನಾಯ್ಕ ನಮ್ಮ ಬಳಿ ಯಾವುದೇ ರಹದಾರಿ ಇರಲಿಲ್ಲ ಕಾಡಿನಿಂದ ಅಕ್ರಮವಾಗಿ ಶ್ರೀಗಂಧದ ಮರಗಳನ್ನು ಕಡಿತಲೆ ಮಾಡಿ ತುಂಡುಗಳನ್ನಾಗಿ ಪರಿವರ್ತಿಸಿಕೊಂಡು ಮಾರುತಿ ಕಾರು ಸಂಖ್ಯೆ: ಎಂಜಿಆರ್:4206 ರಲ್ಲಿ ಸಾಗಾಣಿಕೆ ಮಾಡುತ್ತಿದ್ದೆವು ಎಂದು ತಿಳಿಸಿದರು ಎಂದು ನುಡಿದಿರುತ್ತಾರೆ.

ಈ ಕೃತ್ಯದಲ್ಲಿ ವಶಪಡಿಸಿಕೊಂಡು ಶ್ರೀಗಂಧದ ತುಂಡುಗಳಿಗೆ 1 ರಿಂದ 84 ಎಂದು ಸಂಖ್ಯೆಯನ್ನು ಕೊಟ್ಟು ಅವುಗಳನ್ನು ತೂಕ ಮಾಡಲಾಗಿ ತುಂಡುಗಳ ಅಂದಾಜು ತೂಕ 81 ಕೆ.ಜಿ. ಹಾಗೂ ಶ್ರೀಗಂಧದ ಚೆಕ್ಕೆಗಳ ತೂಕ 6 ಕೆ.ಜಿ. ಇದ್ದು ಇವುಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಳ್ಳಲಾಯಿತು. ಹಾಗೂ ಪ್ರಕರಣಕ್ಕೆ ಬಳಸಿದ ಬಿಳಿ ಬಣ್ಣದ ಮಾರುತಿ ಕಾರು ಸಂಖ್ಯೆ: ಎಂ.ಜಿ.ಆರ್.4206ನ್ನು ಪರೀಕ್ಷೆ ಮಾಡಿ ನೋಡಲಾಗಿ ಛಾಸಿ ನಂಬರ್ 147487 ಹಾಗೂ ಇಂಜಿನ್ ನಂಬರ್ 195490 ಎಂದು ಕಂಡು ಬಂದಿತು. ಈ ಬಗ್ಗೆ ವಿವರವಾದ ಪಂಚನಾಮೆಯನ್ನು ಬರೆದು ಶ್ರೀಗಂಧದ ತುಂಡುಗಳು, ಚೆಕ್ಕೆಗಳು, ವಾಹನಗಳನ್ನು ಸರ್ಕಾರಕ್ಕೆ ಜಪ್ತುಪಡಿಸಿಕೊಂಡು ಆರೋಪಿತ ಶ್ರೀ ರಾಮನಾಯ್ಕನನ್ನು ದಸ್ತಗಿರಿ ಮಾಡಿದ ಬಗ್ಗೆ ವಿವರವಾದ ಪಂಚನಾಮೆಯನ್ನು ಮಾಡಿ ಸ್ಥಳದಲ್ಲೇ ಪ್ರಥಮ ವರ್ತಮಾನದ ವರದಿ ಮತ್ತು ಜಪ್ತು ವರದಿಯನ್ನು ಸಿದ್ದಪಡಿಸಲಾಯಿತು. ಬೆಳಿಗ್ಗೆ ಬರುವ ಮುನ್ನ ವಲಯ ಕಛೇರಿಯಿಂದ ಅರಣ್ಯ ಮೊಕದ್ದಮೆ ಸಂಖ್ಯೆಯನ್ನು ತಿಳಿದುಕೊಂಡು ಬಂದಿದ್ದೆವು. ಅಂದು ನಾನು ದಾಖಲಿಸಿದ ಪಂಚನಾಮೆಯನ್ನು ನಿಶಾನೆ ಪಿ–1 ಎಂತಲೂ, ಅದರಲ್ಲಿರುವ ನನ್ನ ಸಹಿಯನ್ನು ನಿಶಾನೆ ಪಿ–1ಎ ಎಂತಲೂ

ಪ್ರಥಮ ವರ್ತಮಾನ ವರದಿಯನ್ನು ಪಿ–2 ಎಂತಲೂ ಅದರಲ್ಲಿರುವ ನನ್ನ ಸಹಿಯನ್ನು ಪಿ–2ಎ ಎಂತಲೂ ಫಾರಂ ನಂಬರ್ 20 ಜಪ್ತು ವರದಿಯನ್ನು ನಿಶಾನೆ ಪಿ–3 ಎಂತಲೂ ಅದರಲ್ಲಿರುವ ನನ್ನ ಸಹಿಯನ್ನು ನಿಶಾನೆ ಪಿ–3ಎ ಎಂತಲೂ ಗುರುತಿಸಲಾಯಿತು. ತುಂಡುಗಳ ಮೇಲೆ ಹಾಗೂ ಜಪ್ತು ಪಡಿಸಿದ ಕಾರಿನ ಮೇಲೆ ಅರಣ್ಯ ಮೊಕದ್ದಮೆ ಸಂಖ್ಯೆ: 18/99–2000 ದಿನಾಂಕ: 27.04.1999 ಎಂಬುದಾಗಿ ನಮೂದಿಸಲಾಯಿತು. ಮತ್ತು ಸದರಿ ಶ್ರೀಗಂಧದ ತುಂಡುಗಳ ಪೈಕಿ ಯಾವುದರ ಮೇಲೆ ಬರೆಯಲಿಕ್ಕೆ ಸಾಧ್ಯವಿದೆಯೋ ಅವುಗಳ ಮೇಲೆ ಮಾತ್ರ ನಮೂದಿಸಲಾಯಿತು. ತುಂಡುಗಳನ್ನು ಚೆಕ್ಕೆಗಳನ್ನು ಹಾಗೂ ಕಾರನ್ನು ನೋಡಿದರೆ ಗುರುತಿಸುತ್ತೇನೆ. ಆರೋಪಿತ ಅಸಾಮಿಯ ಹೇಳಿಕೆಯನ್ನು ಸ್ಥಳದಲ್ಲೇ ಪಡೆಯಲಾಯಿತು. ಮೊಕದ್ದಮೆಯಲ್ಲಿ ಜಪ್ತು ಪಡಿಸಿದ ಮುದ್ದೆ ಮಾಲು ಮತ್ತು ಆರೋಪಿತರೊಂದಿಗೆ ಗಾಜನೂರು ವಲಯ ಅರಣ್ಯಾಧಿಕಾರಿಗಳ ಕಛೇರಿಗೆ ಬಂದು ನಂತರ ಆರೋಪಿತ ಶ್ರೀರಾಮನಾಯ್ಕನನ್ನು ಶಿವಮೊಗ್ಗದ ಮಾನ್ಯ ಘನ ನ್ಯಾಯಾಲಯಕ್ಕೆ ಒಪ್ಪಿಸಲಾಯಿತು ಮತ್ತು ಶ್ರೀಗಂಧದ ತುಂಡುಗಳು, ಚೆಕ್ಕೆ ಮತ್ತು ಇದರ ಸಾಗಾಣಿಕೆ ಬಳಸಿದ ಕಾರನ್ನು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮಕ್ಷಮ ಹಾಜರ್‌ಪಡಿಸಲಾಯಿತು. ಸದರಿಯವರು ವಾಹನ ಮತ್ತು ಉತ್ಪನ್ನವನ್ನು ಸುಪರ್ಧಿಗೆ ಇಟ್ಟುಕೊಳ್ಳಲು ಕೊಟ್ಟಿರುತ್ತಾರೆ. ಪ್ರಾಧಿಕೃತ ಅಧಿಕಾರಿಯವರಿಗೆ ಹಾಜರ್‌ಪಡಿಸಿದ ವರದಿಯನ್ನು ಪಿ–4 ಎಂದು ಅದರಲ್ಲಿನ ನನ್ನ ಸಹಿಯನ್ನು ಪಿ–4ಎ ಎಂದು ಗುರುತಿಸಲಾಯಿತು. ಈ ಮಾರುತಿ ಕಾರಿನಲ್ಲಿ ಸಾರಿಗೆ ಇಲಾಖೆಯ ಯಾವುದೇ ಕಾಗದ ಪತ್ರಗಳು ನನಗೆ ಸಿಕ್ಕಿರುವುದಿಲ್ಲ. ಆ ದಿವಸ ಸದರಿ ಕಾರಿನ ಚಾಲಕ ಯಾರು ಎಂಬುದು ಸಹ ಗೊತ್ತಿಲ್ಲ ನಾನು ಅವರೊಂದಿಗೆ ಜಗಳವಾಡಿದ್ದು ಸಹ ಇರುವುದಿಲ್ಲ ಎಂಬುದಾಗಿ ನುಡಿದಿರುತ್ತಾರೆ.

ಅರ್ಜಿದಾರರು ಹಾಗೂ ಅವರ ವಕೀಲರು ಗೈರು ಹಾಜರಾಗಿದ್ದರಿಂದ ಪಾಟಿ ಸವಾಲನ್ನು ಇಲ್ಲವೆಂದು ಪರಿಗಣಿಸಲಾಯಿತು.

ಮೇಲ್ಕಂಡ ಸಾಕ್ಷಿದಾರರು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳನ್ನು ಮತ್ತು ಸ್ಥಳ ಮಹಜರ್‌ನಲ್ಲಿರುವ ಅಂಶಗಳಿಗೂ ತಾಳೆ ಹೊಂದುತ್ತದೆ. ಅಲ್ಲದೇ ಸಾಕ್ಷಿದಾರರು ನೀಡಿದ ಹೇಳಿಕೆ ಮತ್ತು ದಾಖಲಾತಿಗಳಿಗೂ ಯಾವುದೇ ವ್ಯತ್ತಿರಿಕ್ತವಾಗಿರುವುದಿಲ್ಲ. ಅರ್ಜಿದಾರರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧ ತುಂಡುಗಳು ಸಾಗಾಣಿಕೆ ಆಗಿರುವುದು ಹಾಗೂ ಅರಣ್ಯ ಕಾಯ್ದೆ ಕಾನೂನುಗಳನ್ನು ಉಲ್ಲಂಘನೆ ಮಾಡಿರುವುದು ಸಂಶಯ ರಹಿತವಾಗಿ ರುಜುವಾತಾಗಿರುತ್ತದೆ. ಇದಕ್ಕೆ ಅಭಿಯೋಜನಾ ಪರ ಸಾಕ್ಷಿದಾರರು ಸಾಕ್ಷಿ ನೀಡಿ ಗುರುತಿಸಿದ ನಿಶಾನೆಗಳು ಪೂರಕವಾಗಿರುತ್ತವೆ. ಆದ್ದರಿಂದ ಅಂಶ–1ಕ್ಕೆ ಉತ್ತರ ಹೌದು ಎಂದಾಗಿದೆ.

**ಅಂಶ–2:–** ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಮಾರುತಿ ಕಾರು ಸಂಖ್ಯೆ: ಎಂಜಿಆರ್ 4206ರ ಮಾಲೀಕರೆಂದು ಶ್ರೀಮತಿ ಅಬೀದಾ ಬೇಗಂ ಇವರು ದಿನಾಂಕ: 20.07.99 ರಂದು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿಗೆ ದಿನಾಂಕ: 27.12.1999 ರಂದು ಅರ್ಜಿದಾರರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳುವ ಪತ್ರವನ್ನು ನೀಡಿರುತ್ತದೆ. ಅರ್ಜಿದಾರರು ದಿನಾಂಕ: 05.01.2000 ರಂದು ಸಮಜಾಯಿಷಿ ನೀಡಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ಈ ನ್ಯಾಯಾಲಯದಲ್ಲಿ ನಡೆಯುವ ವಿಚಾರಣೆಗೆ ಹಾಜರಾಗಲು ಅರ್ಜಿದಾರರಿಗೆ ದಿನಾಂಕ: 13.02.2004, 08.03.2004, 17.05.2004, 30.06.2004, 27.07.2004, 12.12.2005, 14.02.2006, 03.03.2006, 17.07.2006 ನೋಟೀಸನ್ನು ಕಳುಹಿಸಿಕೊಡಲಾಗಿದ್ದರೂ ವಿಚಾರಣೆಗೆ ಹಾಜರಾಗದೆ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುತ್ತಾರೆ. ಆದ ಕಾರಣ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ವಾಹನದ ಅಧಿಕೃತ ಮಾಲೀಕರಿಗೆ ಸಾಕಷ್ಟು ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ–2ಕ್ಕೆ ಉತ್ತರ ಹೌದು ಎಂಬುದಾಗಿದೆ.

**ಅಂಶ–3:–** ವಾಹನದ ಮಾಲೀಕರಾದ ಶ್ರೀಮತಿ ಅಬೀದಾ ಬೇಗಂ ಇವರು ದಿನಾಂಕ: 20.07.1999 ರಂದು ಅರ್ಜಿಸಲ್ಲಿಸಿದ್ದು ಈ ಬಗ್ಗೆ ವಾಹನ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ಮತ್ತು ಈ ಪ್ರಕರಣದಲ್ಲಿ ದಿನಾಂಕ: 31.08.2000 ರಿಂದ 22.07.2006 ರ ವರೆಗೆ ವಿವಿಧ ದಿನಾಂಕಗಳಂದು ವಿಚಾರಣೆ ನಡೆದಿದ್ದು ಆ ಸಂದರ್ಭದಲ್ಲಿ ಅರ್ಜಿದಾರರಿಗೆ ಮತ್ತು ಅರ್ಜಿದಾರರ ಪರ ವಕೀಲರಿಗೆ ನ್ಯಾಯಾಲಯಕ್ಕೆ ಹಾಜರಾಗಲು ನೋಟೀಸ್ ಜಾರಿ ಮಾಡಲಾಗಿರುತ್ತದೆ. ಅರ್ಜಿದಾರರು ಅವರ ಪರ ವಕೀಲರು ನ್ಯಾಯಾಲಯಕ್ಕೆ ಗೈರು ಹಾಜರಾಗಿರುತ್ತಾರೆ. ಅರ್ಜಿದಾರರು ಈ ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯಿಂದ ಈ ಕೆಳ ಕಾಣಿಸಿದ ಅಂಶಗಳು ಕಂಡು ಬರುತ್ತವೆ.

1. ಅರ್ಜಿದಾರರು ವಾಹನವನ್ನು ಅವರ ಸಂಬಂಧಿಕರನ್ನು ತೀರ್ಥಹಳ್ಳಿಗೆ ಕಳುಹಿಸಿ ಕೊಡುವುದಕ್ಕೆ ಕಳುಹಿಸಿರುವುದಾಗಿ ಮಧ್ಯಂತರ ಅರ್ಜಿಯಲ್ಲಿ ತಿಳಿಸಿದ್ದು ಆ ಸಮಯದಲ್ಲಿ ಈ ಕೃತ್ಯ ನಡೆದಿರುವುದಾಗಿ ನನಗೆ ಏನೂ ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಇದೊಂದು ಕಟ್ಟು ಕಥೆ ಎಂದು ಭಾವಿಸಬೇಕಾಗುತ್ತದೆ. ಕಾರಣ 27.04.1999 ರಂದು ಅರ್ಜಿದಾರರ ಸಂಬಂಧಿಕರನ್ನು ತೀರ್ಥಹಳ್ಳಿಗೆ ಕಳುಹಿಸಿ ಕೊಟ್ಟಿದ್ದು ಸದರಿ ದಿನದಂದೇ ಪ್ರಕರಣ ದಾಖಲಾಗಿರುತ್ತದೆ. ಆದರೆ ಅರ್ಜಿದಾರರು ದಿನಾಂಕ: 20.07.1999 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿದ್ದು, 3 ತಿಂಗಳು ತಡವಾಗಿ ಸಲ್ಲಿಸಿದ್ದರ ಬಗ್ಗೆ ಯಾವುದೇ ಸಮಂಜಸವಾದ ಕಾರಣವನ್ನು ಮಧ್ಯಂತರ ಅರ್ಜಿಯಲ್ಲಿ ನೀಡಿರುವುದಿಲ್ಲ. ಇದನ್ನು ಗಮನಿಸಿದಾಗ ವಾಹನದ ಮಾಲೀಕರಿಗೆ ವಾಹನದ ಉಸ್ತುವಾರಿಯ ಕುರಿತು ಇರುವ ಆಸಕ್ತಿಯ ಬಗ್ಗೆ ಸಂಶಯ ಉಂಟಾಗುತ್ತದೆ.
2. ಅಲ್ಲದೇ ವಾಹನವನ್ನು ಕಳುಹಿಸಿಕೊಟ್ಟ ನಂತರ ಅದು ವಾಪಸ್ಸು ಬಾರದೇ ಇದ್ದ ತಕ್ಷಣ (ವಾಹನ ಚಾಲಕನ ಮೇಲೆ) ವಾಹನವನ್ನು ಸುಪರ್ದು ಕೊಟ್ಟ ವ್ಯಕ್ತಿಯ ಮೇಲೆ ಪೊಲೀಸ್ ಠಾಣೆಯಲ್ಲಿ ಯಾವುದೇ ಫಿರ್ಯಾದು ಕೊಟ್ಟ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಸಾಕ್ಷ್ಯವನ್ನು ಹಾಜರು ಪಡಿಸಿರುವುದಿಲ್ಲ. ಇದು ಕೂಡ ಅನುಮಾನಕ್ಕೆ ಎಡೆ ಮಾಡುತ್ತದೆ.

3. ಅರ್ಜಿದಾರರು ಅವರ ಸಂಬಂಧಿಕರನ್ನು ಆ ದಿನ ತೀರ್ಥಹಳ್ಳಿಗೆ ಕಳುಹಿಸಿದ್ದೇ ಆದಲ್ಲಿ ಅವರ ಹೆಸರು ವಿಳಾಸವನ್ನು ಮಧ್ಯಂತರ ಅರ್ಜಿಯಲ್ಲಿ ತಿಳಿಸಬಹುದಾಗಿತ್ತು. ಅಲ್ಲದೇ ಈ ಪ್ರಾಧಿಕಾರದ ವಿಚಾರಣೆ ವೇಳೆಯಲ್ಲಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಸಾಕ್ಷಿಯನ್ನಾಗಿ ಮಾಡಿ ತಾನು ತಪ್ಪಿತಸ್ಥನಲ್ಲ ಹಾಗೂ ಈ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧವಿಲ್ಲ ಎಂದು ಅರ್ಜಿದಾರರು ದೃಢಪಡಿಸಲು ಯಾವುದೇ ಅಭ್ಯಂತರವಿರಲಿಲ್ಲ. ಈ ರೀತಿ ಮಾಡದೇ ಇರುವುದು ಸಹ ಒಂದು ಪ್ರಮುಖ ಲೋಪವೆಂದು ಪರಿಗಣಿಸಬಹುದಾಗಿದೆ.

ಮೇಲ್ಕಂಡ ಎಲ್ಲ ಅಂಶಗಳನ್ನು ಪರಿಶೀಲಿಸಿದಾಗ ಅರ್ಜಿದಾರರು / ವಾಹನವನ್ನು ಸುಪರ್ದು ಪಡೆದವರಿಗೆ ತಿಳುವಳಿಕೆ ಅಥವಾ ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಪ್ರತಿವಾದಿಗಳು ರುಜುವಾತು ಪಡಿಸಿರುವುದಿಲ್ಲ. ವಾಹನದ ಮಾಲೀಕರು ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ತೆಗೆದುಕೊಂಡಿದ್ದರೆ ಈ ಕೃತ್ಯ ನಡೆಯುತ್ತಿರಲಿಲ್ಲ. ಅರ್ಜಿದಾರರು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯಲ್ಲಿನ ವಿಷಯ, ವಾಹನ ಬಿಡಿಸಿಕೊಳ್ಳಲು ಸೃಷ್ಟಿಸಿದ ಒಂದು ಕಟ್ಟು ಕಥೆ ಮತ್ತು ನಂಬಲು ಅಸಾಧ್ಯವಾಗಿರುತ್ತದೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆಗೆ ಬಳಸದಂತೆ ವಾಹನ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಿಗಳನ್ನು ನೀಡಿರುವುದಿಲ್ಲ ಮತ್ತು ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕೂಡ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71(ಬಿ) ಪ್ರಕಾರ ಸಾಬೀತು ಪಡಿಸುವ ಜವಾಬ್ದಾರಿ ವಾಹನ ಮಾಲೀಕರ ಮೇಲಿದ್ದು ಈ ನಿಟ್ಟಿನಲ್ಲಿ ಅರ್ಜಿದಾರರು ವಿಫಲರಾಗಿರುತ್ತಾರೆ.

ಆದರೆ ದಿನಾಂಕ: 27.04.1999 ರಂದು, ಅರ್ಜಿದಾರರ ವಾಹನವನ್ನು ಅಕ್ರಮ ಶ್ರೀಗಂಧದ ತುಂಡುಗಳನ್ನು ಸಾಗಾಣಿಕೆ ಮಾಡುವಲ್ಲಿ ನಿರತವಾಗಿದ್ದಾಗಿ, ಫಿರ್ಯಾದುದಾರನು ಪತ್ತೆ ಹಚ್ಚಿರುವುದಾಗಿ ನಿಶಾನೆಗಳಿಂದ ಮತ್ತು ಸಾಕ್ಷಿಯಿಂದ ನಿಸ್ಸಂಶಯವಾಗಿ ದೃಢಪಡಿಸಿರುತ್ತಾರೆ.

ಈ ಮೇಲಿನ ಕಾರಣದಿಂದಾಗಿ 3ನೇ ಅಂಶವನ್ನು ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನ ಮಾಲೀಕರು ಶ್ರೀಗಂಧದ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಅಲ್ಲದೇ ಪ್ರಾಧಿಕಾರಕ್ಕೆ ಹಾಜರು ಪಡಿಸಿದ ಮಹಜರ್ ಮತ್ತಿತರೆ ದಾಖಲೆಗಳು ಹಾಗೂ ಪಿಡಬ್ಲ್ಯೂ–1ರ ಸಾಕ್ಷಿದಾರರು ಪ್ರಾಧಿಕಾರದ ಮುಂದೆ ನುಡಿದ ಸಾಕ್ಷಿಯಿಂದ ಶ್ರೀಗಂಧವನ್ನು ಸಾಗಿಸಲು ವಾಹನ ಉಪಯೋಗಿಸಿರುವುದು ರುಜುವಾತಾಗಿರುತ್ತದೆ. ಆದರೆ ಅರ್ಜಿದಾರರ ಪರ ವಕೀಲರು, ಅರ್ಜಿದಾರರು ವಾಹನವನ್ನು ಅಕ್ರಮವಾಗಿ ಶ್ರೀಗಂಧದ ಸಾಗಾಣಿಕೆಗೆ ಭಾಗಿಯಾಗದಂತೆ ಯಾವುದೇ ಮುಂಜಾಗ್ರತಾ ಕ್ರಮ ಕೈಗೊಂಡ ಬಗ್ಗೆ ಸಾಕ್ಷ್ಯದಾರಗಳು ಮತ್ತು ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಅರ್ಜಿದಾರರಿಗೆ ಗೊತ್ತಿದ್ದೆ ವಾಹನದಲ್ಲಿ ಶ್ರೀಗಂಧ ಸಾಗಾಣಿಕೆಯಾಗುತ್ತಿತ್ತು ಎಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್. ಕರ್ಕಿಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿರುವ ಬಿಳಿ ಮಾರುತಿ ಕಾರು ನೋಂದಣಿ ಸಂಖ್ಯೆ: ಎಂ.ಜಿ.ಆರ್–4206 (ಎಂಜಿನ್ ಸಂಖ್ಯೆ:195490, ಛಾಸ್ಸಿ ಸಂಖ್ಯೆ: 147487) ಮತ್ತು ಶ್ರೀಗಂಧದ ತುಂಡುಗಳು ಮತ್ತು ಚೆಕ್ಕೆ ಒಟ್ಟು 87 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಸದರಿ ವಾಹನವು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ. ಮುಟ್ಟುಗೋಲು ಹಾಕಿಕೊಂಡ ಒಟ್ಟು 87 ಕೆ.ಜಿ. ಶ್ರೀಗಂಧವನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಘನ ನ್ಯಾಯಾಲಯದಲ್ಲಿ ನಡೆಯುತ್ತಿರುವ ಕ್ರಿಮಿನಲ್ ಕೇಸ್ ಮುಕ್ತಾಯವಾಗುವವರೆಗೆ ಕಾಯ್ದುಕೊಳ್ಳುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗಾಗಿ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವನ್ನು ದಿನಾಂಕ: 29.09.2006 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಜಿ.ಎ.ಎನ್. ಕರ್ಕಿಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಅನುಬಂಧ**

**ಅಭಿಯೋಜನ ಪರ ಸಾಕ್ಷಿ**

1. ಶ್ರೀ ಶಿವಯ್ಯ, ನಿವೃತ್ತ ವಲಯ ಅರಣ್ಯಾಧಿಕಾರಿ, ಸಕ್ರೆಬೈಲ್ ವನ್ಯಜೀವಿ ವಲಯ, ಗಾಜನೂರು – ಪಿಡಬ್ಲ್ಯೂ–1

**2. ಅಭಿಯೋಜನಾ ಪರ ನಿಶಾನೆಗಳು:**

| | | |
|---|---|---|
| 1. ಸ್ಥಳ ಮಹಜರ್ | : | ನಿಶಾನೆ – 1 |
| 2. ಪ್ರಥಮ ಮಾಹಿತಿ ವರದಿ | : | ನಿಶಾನೆ – 2 |

| | | | |
|---|---|---|---|
| 3. | ಅಮಾನತ್ತು ವರದಿ | : | ನಿಶಾನೆ – 3 |
| 4. | ಅಧಿಕಾರಯುತ ಅಧಿಕಾರಿಯವರಿಗೆ ಹಾಜರ್ ಪಡಿಸಿದ ವರದಿ | : | ನಿಶಾನೆ – 4 |
| 5. | ಶ್ರೀಗಂಧದ ತುಂಡುಗಳು, ಚೆಕ್ಕೆಗಳು. | : | MO 1 to 85 |
| 6. | ಬಿಳಿ ಬಣ್ಣದ ಮಾರುತಿ ಕಾರು ನೋಂದಣಿ ಸಂ: ಎಂ.ಜಿ.ಆರ್:4206. | : | MO 86 |

**3. ಅರ್ಜಿದಾರರ ಪರ ಸಾಕ್ಷಿ ಹಾಗೂ ಗುರುತಿಸಲ್ಪಟ್ಟ ದಾಖಲೆಗಳು:**

– ಇಲ್ಲ –

**ಜಿ.ಎ.ಎನ್. ಕರ್ಕಿಕರ್**

ಪಿ.ಆರ್. 1550

ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂ:ಎ3(ಬಿ1) ಅಮೊ:ಸಕ್ರೆ:59:2001–02, ದಿನಾಂಕ: 29ನೇ ಸೆಪ್ಟೆಂಬರ್ 2006**

**ಉಪಸ್ಥಿತರು:** ಶ್ರೀ ಜಿ.ಎ.ಎನ್. ಕರ್ಕಿಕರ್
ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ,
ಸಕ್ರೆಬೈಲ್ ವನ್ಯಜೀವಿ ವಲಯ ಗಾಜನೂರು
(ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ)

**ಅರ್ಜಿದಾರರು:** ಶ್ರೀ ಜಯಣ್ಣ ಬಿನ್ ಮಂಜಪ್ಪ,
ವ್ಯವಸಾಯಗಾರರು, ಹೊಸಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕ್,
(ಪರವಾಗಿ ಅನಿಲ್ ಕುಮಾರ್, ನ್ಯಾಯವಾದಿಗಳು, ಶಿವಮೊಗ್ಗ)

**ಪ್ರಕರಣದ ಹಿನ್ನೆಲೆ:**

ದಿನಾಂಕ: 15.10.2001 ರಂದು ರಾತ್ರಿ 8.00 ಗಂಟೆಗೆ ಸಕ್ರೆಬೈಲ್ ವಲಯ ಕಛೇರಿಗೆ ಬಂದ ವರ್ತಮಾನದ ಮೇರೆಗೆ ಸಕ್ರೆಬೈಲ್ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಗಳು ಇಲಾಖಾ ಜೀಪ್ ಸಿಎಜಿ–4772 ರಲ್ಲಿ ಹೊರಟು ಬಸವಾಪುರ ಕ್ಯಾಂಪಿನಲ್ಲಿ ಜೀಪನ್ನು ನಿಲ್ಲಿಸಿ, ಬಸವಾಪುರ ಕ್ಯಾಂಪಿನ ಸಿಬ್ಬಂದಿಯೊಡಗೂಡಿ ರಾತ್ರಿ 10.00 ಗಂಟೆಯ ಸಮಯದಲ್ಲಿ ಕ್ಯಾಂಪಿನಿಂದ ಕಾಲ್ನಡಿಗೆಯಲ್ಲಿ ಶಾಂತಣ್ಣನ ಕೆರೆ ಮೂಲಕ ಸಕ್ರೆಬೈಲ್ ಮನ್ನಾ ಜಂಗಲಿ ಡಿ ಲೈನ್‌ನಲ್ಲಿ ಗಸ್ತು ಮಾಡಿಕೊಂಡು ಹೋಗುತ್ತಿರುವಾಗ ಸುರಂಗದ ಮಟ್ಟಿ ಅರಣ್ಯ ಪ್ರದೇಶದ ಕಡೆಯಿಂದ ಗಾಡಿ ಬರುತ್ತಿರುವ ಶಬ್ದವನ್ನು ಕೇಳಿ ಕಾರ್ಯಮಗ್ನರಾದ ಸಿಬ್ಬಂದಿಗಳು ಸದರಿ ಶಬ್ದ ಬಂದ ಕಡೆ ದಾವಿಸುತ್ತಿದ್ದಾಗ ಎತ್ತಿನ ಗಾಡಿಯೊಂದಿಗೆ ಸುಮಾರು 5–6 ಜನರು ಬ್ಯಾಟರಿ ಸಹಾಯದಿಂದ ಬರುತ್ತಿರುವುದನ್ನು ಕಂಡು ಗಾಡಿ ಬರುವ ಜಾಗದ ಕಡೆ ಬೆಳಕನ್ನು ಹಾಯಿಸಿ ಸಮೀಪಿಸುತ್ತಿದ್ದಾಗ ಇಲಾಖಾ ಸಿಬ್ಬಂದಿಗಳನ್ನು ಕಂಡ ಜನರು ಗಾಡಿ ಮತ್ತು ಎತ್ತುಗಳನ್ನು ಬಿಟ್ಟು ಓಡಲು ಪ್ರಾರಂಭಿಸಿರುತ್ತಾರೆ. ಅವರುಗಳನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿ ನಾಲ್ಕು ಬಾರಿ ಗಾಳಿಯಲ್ಲಿ ಗುಂಡು ಹಾರಿಸಿದಾಗ್ಯೂ ಸದರಿ ಅಸಾಮಿಗಳು ನಿಲ್ಲದೆ ಕತ್ತಲೆಯಲ್ಲಿ ಪರಾರಿಯಾಗಿರುತ್ತಾರೆ. ನಂತರ ಗಾಡಿಯ ಹತ್ತಿರ ಬಂದು ನೋಡಿದಾಗ ಒಂದು ಎತ್ತು ಮಾತ್ರ ಇದ್ದು ಇನ್ನೊಂದು ಎತ್ತು ಇರಲಿಲ್ಲ. ಗಾಡಿಯ ಒಳಗೆ ಮೂರು ಬೀಟೆ ತುಂಡುಗಳಿದ್ದು ಅವುಗಳನ್ನು ಗರಗಸ ಮತ್ತು ಕೊಡಲಿಯಿಂದ ಕಡಿತಲೆಮಾಡಿ ತಯಾರಿಸಿದವುಗಳಾಗಿದ್ದು ಅವುಗಳ ಮೇಲೆ ಇಲಾಖಾ ಛಾಪಾ ಇಲ್ಲದಿರುವುದನ್ನು ಗಮನಿಸಿ ಗಾಡಿ, ಎತ್ತು ಮತ್ತು ಬೀಟೆ ತುಂಡುಗಳನ್ನು ಪ್ರಮಾಣ 3=0.654 ಘ.ಮೀ. ನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ: 59:2001–02 ನ್ನು ದಾಖಲಿಸಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಶಪಡಿಸಿಕೊಂಡ ಬೀಟೆ ತುಂಡುಗಳು, ಒಂದು ಎತ್ತನ್ನು ಹಾಗೂ ಒಂದು ಟೈರ್ ಗಾಡಿಯನ್ನು 1963ನೇ ಕರ್ನಾಟಕ ಅರಣ್ಯ ಕಾಯಿದೆ ಸೆಕ್ಷನ್ 71(ಎ) ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿ, ಸಕ್ರೆಬೈಲ್ ವನ್ಯಜೀವಿ ವಲಯ, ಗಾಜನೂರು ರವರು ಈ ಪ್ರಾಧಿಕಾರದ ಮುಂದೆ ಹಾಜರ್ ಪಡಿಸಿದ ಮೇರೆಗೆ ಒಂದು ಟೈರ್ ಗಾಡಿ, ಒಂದು ಎತ್ತು ಮತ್ತು ಅರಣ್ಯ ಉತ್ಪನ್ನವಾದ ಮೂರು ಬೀಟೆ ತುಂಡುಗಳು 0.654 ಘ.ಮೀ. ನ್ನು ಸಕ್ರೆಬೈಲ್ ವನ್ಯಜೀವಿ ವಲಯ ಗಾಜನೂರು ಇವರ ಸುಪರ್ಧಿಗೆ ಮುಂದಿನ ಆದೇಶವಾಗುವವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಲು ಆದೇಶಿಸಲಾಗಿರುತ್ತದೆ.

ಅನಂತರ ದಿನಾಂಕ: 18.10.2001 ರಂದು ಶ್ರೀ ಜಯಣ್ಣ ಬಿನ್ ಮಂಜಪ್ಪ, ವ್ಯವಸಾಯಗಾರ, ಹೊಸಕೊಪ್ಪ ಗ್ರಾಮದ ವಾಸಿ, ಶಿವಮೊಗ್ಗ ತಾಲ್ಲೂಕು ಇವರು ಟೈರ್ ಗಾಡಿಯ ಮಾಲೀಕನೆಂದು ಹೇಳಿಕೊಂಡು ಗಾಡಿ ಮತ್ತು ಎತ್ತುಗಳನ್ನು ಮಧ್ಯಂತರ ಆದೇಶದ ಮೇರೆಗೆ ಬಿಡುಗಡೆ ಮಾಡುವಂತೆ ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಸಲ್ಲಿಸಿದ್ದು, ಸದರಿ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 02.11.2001 ರಂದು ತಮ್ಮ ಲಿಖಿತ ಆಕ್ಷೇಪಣೆಯನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಅರ್ಜಿದಾರರು ವಕೀಲರ ಮುಖಾಂತರ ಸಲ್ಲಿಸಿದ ಅರ್ಜಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಲವು ನಿಬಂಧನೆಗೊಳಪಟ್ಟು ಒಂದು ಎತ್ತನ್ನು ಮಧ್ಯಂತರವಾಗಿ ಬಿಡುಗಡೆ ಮಾಡಲು ದಿನಾಂಕ: 02.11.2001 ರಂದು ಪ್ರಾಧಿಕಾರ ಆದೇಶ ಹೊರಡಿಸಿರುತ್ತದೆ. ಈ ಆದೇಶದನ್ವಯ ಅರ್ಜಿದಾರರು ರೂ.3000–00 ಬ್ಯಾಂಕ್ ಗ್ಯಾರಂಟಿಯನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶಿವಮೊಗ್ಗ ದಿಂದ ಪಡೆದು ಸಲ್ಲಿಸಿದ ಮೇರೆಗೆ ಒಂದು ಎತ್ತನ್ನು ಬಿಡುಗಡೆ ಗೊಳಿಸಲಾಗಿರುತ್ತದೆ.

ನಂತರ ಈ ಪ್ರಕರಣದ ವಿಚಾರಣಾ ಕಾಲಕ್ಕೆ ಅಭಿಯೋಜನಾ ಪರ ಒಬ್ಬ ಸಾಕ್ಷಿದಾರರನ್ನು ವಿಚಾರಣೆ ಮಾಡಿದ್ದು ಪಿಡಬ್ಲ್ಯೂ–1 ಶ್ರೀ ಎ.ವಿ.ಸತೀಶ, ವನಪಾಲಕ ಇವರಾಗಿದ್ದು ಈ ಸಾಕ್ಷಿಯ ಮೂಲಕ ಈ ಕೆಳಕಂಡ ದಾಖಲಾತಿಗಳನ್ನು ಗುರುತಿಸಲಾಗಿರುತ್ತದೆ.

1. ನಿಶಾನೆ ಪಿ–1 – ಮಹಜರ್
2. ನಿಶಾನೆ ಪಿ–2 – ಪ್ರಥಮ ಮಾಹಿತಿ ವರದಿ
3. ಎಮ್ಒ–1 – ಟೈರ್‌ಗಾಡಿ
4. ಎಮ್ಒ–2–4 – 3 ಬೀಟೆ ತುಂಡುಗಳು

ಅರ್ಜಿದಾರರ ಪರ ವಕೀಲರು ಈ ಮೊಕದ್ದಮೆ ವಿಚಾರಣೆ ಸಂದರ್ಭದಲ್ಲಿ ಗಾಡಿಯ ಮಾಲೀಕರಾದ ಡಿ.ಡಬ್ಲ್ಯೂ–1 ಅರ್ಜಿದಾರರಾದ ಶ್ರೀ ಜಯಣ್ಣ ಬಿನ್ ಮಂಜಪ್ಪ, ಹೊಸಕೊಪ್ಪ ಗ್ರಾಮ ಇವರನ್ನು ವಿಚಾರಣೆಗೆ ಒಳಪಡಿಸಿದ್ದರು. ವಾದ–ವಿವಾದಕ್ಕೆ ಸಂಬಂಧಿಸಿದಂತೆ ಅರ್ಜಿದಾರರ ಪರ ವಕೀಲರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದಾಗ್ಯೂ ಹಾಜರಾಗಿರುವುದಿಲ್ಲ. ಸರ್ಕಾರದ ಪರ ಹಾಗೂ ಟೈರು ಗಾಡಿಯ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ಪರಿಶೀಲನಾಂಶಗಳನ್ನು ತೀರ್ಮಾನಿಸುವುದು ಅಗತ್ಯವೆಂದು ಭಾವಿಸಲಾಯಿತು.

1. ಅರ್ಜಿದಾರರ ಟೈರ್‌ಗಾಡಿಯಲ್ಲಿ ದಿನಾಂಕ: 15.10.2001 ರಂದು ಅಕ್ರಮವಾಗಿ ಬೀಟೆ ತುಂಡುಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಅಮಾನತ್ತು ಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲು ಮಾಡಲಾಗಿರುತ್ತದೆ ಎಂದು ಅಭಿಯೋಜನೆಯು ರುಜುವಾತು ಪಡಿಸುತ್ತದೆಯೇ?
2. ಟೈರ್ ಗಾಡಿಯ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಟೈರ್ ಗಾಡಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ತುಂಡುಗಳನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ? ಹಾಗೂ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆ ಕಾನೂನು ಬಾಹಿರವಾಗಿ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ಈ ಟೈರ್ ಗಾಡಿಯ ಮಾಲೀಕರು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದಾರೆಯೇ
3. ಯಾವ ಆದೇಶ

ಮೇಲೆ ತಿಳಿಸಿದ ಪರಿಶೀಲನಾ ಅಂಶಗಳನ್ನು ಲಭ್ಯವಿದ್ದ ಸಾಕ್ಷ್ಯಾಧಾರದ ಮೇಲೆ ಈ ಕೆಳಕಂಡಂತೆ ಉತ್ತರಿಸಿರುತ್ತೇನೆ.

1. ಗುಣಾತ್ಮಕವಾಗಿ
2. ನಕರಾತ್ಮಕವಾಗಿ
3. ಕೊನೆಯ ಆದೇಶದಂತೆ

**ಕಾರಣಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.**

**ಅಂಶ–1:** ಅಭಿಯೋಜನಾ ಪರ ಸಾಕ್ಷಿ ನುಡಿದ ಶ್ರೀ ಎ.ವಿ.ಸತೀಶ್, ವನಪಾಲಕ ಇವರು ದಿನಾಂಕ: 07.07.2004 ರಂದು ನೀಡಿದ ತಮ್ಮ ಸಾಕ್ಷ್ಯದಲ್ಲಿ ನಾನು 2001 ರಿಂದ 2003ರ ವರೆಗೆ ಸಕ್ರೆಬೈಲ್ ವನ್ಯಜೀವಿ, ಗಾಜನೂರು ಇಲ್ಲಿ ವನಪಾಲಕರಾಗಿ ಕರ್ತವ್ಯ ನಿರ್ವಹಿಸಿದ್ದು ದಿನಾಂಕ: 15.10.2001 ರಂದು ಅರಣ್ಯ, ಕಛೇರಿಗೆ ಬಂದ ವರ್ತಮಾನದನ್ವಯ ಸಿಬ್ಬಂದಿಯೊಂದಿಗೆ ಇಲಾಖಾ ವಾಹನದಲ್ಲಿ ಬಸವಾಪುರ ಕ್ಯಾಂಪಿಗೆ ಹೋಗಿ ಜೀಪನ್ನು ನಿಲ್ಲಿಸಿ ಕಾಲ್ನಡಿಗೆಯಲ್ಲಿ ಬ್ಯಾಟರಿಯ ಬೆಳಕಿನ ಸಹಾಯದಿಂದ ಸಕ್ರೆಬೈಲ್ ಮನ್ನಾ ಜಂಗಲಿಯ "ಡಿ" ಲೈನ್‌ನಲ್ಲಿ ಗಸ್ತು ಮಾಡುತ್ತಿದ್ದಾಗ ಸುರಂಗದ ಮಟ್ಟಿ ಅರಣ್ಯ ಪ್ರದೇಶದಿಂದ ಟೈರ್‌ಗಾಡಿ ಬರುವ ಶಬ್ದ ಕೇಳಿ ಶಬ್ದ ಬರುವ ಕಡೆಗೆ ಹೋಗುತ್ತಿದ್ದಾಗ ಬ್ಯಾಟರಿಯ ಬೆಳಕಿನ ಸಹಾಯದಿಂದ ಗಾಡಿಯುನ್ನು ತೆಗೆದುಕೊಂಡು ಹೋಗುತ್ತಿದ್ದವರು ಇಲಾಖೆಯವರನ್ನು ನೋಡಿದ ತಕ್ಷಣ ಗಾಡಿ ಮತ್ತು ಎತ್ತನ್ನು ಬಿಟ್ಟು ಓಡಲು ಪ್ರಾರಂಭಿಸಿದರು. ಅವರನ್ನು ಹಿಡಿಯಲು ಪ್ರಯತ್ನಿಸಿ ಗಾಳಿಯಲ್ಲಿ ಗುಂಡುಹಾರಿಸಿದಾಗ್ಯೂ ನಿಲ್ಲದೆ ಪರಾರಿಯಾಗಿರುತ್ತಾರೆಂದು ತಿಳಿಸಿದರು. ಗಾಡಿಯ ಹತ್ತಿರ ಬಂದು ನೋಡಿದಾಗ ಎರಡು ಎತ್ತುಗಳಲ್ಲಿ ಒಂದು ಎತ್ತು ನುಣುಚಿಕೊಂಡು ಹೋಗಿದ್ದು ಒಂದು ಎತ್ತು ಮಾತ್ರ ಇತ್ತು. ಗಾಡಿಯಲ್ಲಿ ಮೂರು ಬೀಟೆ ತುಂಡುಗಳಿದ್ದು ಅವುಗಳು ಆಗತಾನೆ ಕಡಿತಲೆ ಮಾಡಿದಂತೆ ಕಂಡು ಬಂದವು. ಅಕ್ರಮ ಕಡಿತಲೆಯಾದಂತೆ ಕಂಡು ಬಂದಿದ್ದರಿಂದ ಗಾಡಿ, ಎತ್ತು ಮತ್ತು ಬೀಟೆ ತುಂಡುಗಳನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ತುಂಡುಗಳ ಮೇಲೆ ಅರಣ್ಯ ಮೊಕದ್ದಮೆ ಸಂಖ್ಯೆ: 59/2001–02ನ್ನು ದಾಖಲಿಸಲಾಯಿತು. ಹಾಗೂ ಅಮಾನತ್ತು ಪಡಿಸಿದ ತುಂಡಿನ ಮೇಲೆ ಕೆಂಪು ಬಣ್ಣದಿಂದ ಕ್ರಮ ಸಂಖ್ಯೆ ಹಾಗೂ ಅರಣ್ಯ ಮೊಕದ್ದಮೆ ಸಂಖ್ಯೆ ಬರೆಯಲಾಗಿರುತ್ತದೆ ಎಂದು ಹಾಗೂ ಮಹಜರ್ ಕಾಲಕ್ಕೆ ಹತ್ತಿರದಲ್ಲಿ ಯಾವುದೇ ಮನೆ ಇಲ್ಲದೆ ಅವೇಳೆಯಾದ್ದರಿಂದ ಇಲಾಖೆಯವರೆ ಪಂಚರಾಗಿ ಕಾರ್ಯನಿರ್ವಹಿಸಿರುತ್ತೇವೆ. ಗಾಡಿ ಮತ್ತು ಎತ್ತನ್ನು ನೋಡಿದರೆ ಗುರುತಿಸುತ್ತೇನೆ ಎಂದು ನುಡಿದಿರುತ್ತಾರೆ.

ಮುಂದುವರಿದು ಪಾಟಿ ಸವಾಲಿನಲ್ಲಿ ಉತ್ತರಿಸುತ್ತಾ, ಘಟನಾ ಸ್ಥಳಕ್ಕೆ ನಾವು ಅಂದಾಜು 7–8 ಸಿಬ್ಬಂದಿಗಳು ಹೋಗಿದ್ದು ಕತ್ತಲಾದ್ದರಿಂದ ಗಾಡಿಯಲ್ಲಿ ಎಷ್ಟು ಜನರಿದ್ದರು ಎಂದು ಗೊತ್ತಾಗಲಿಲ್ಲ. ಆರೋಪಿತರು ಗಾಡಿಯ ಜೊತೆ ಬ್ಯಾಟರಿಯ ಬೆಳಕನ್ನು ಬಿಟ್ಟುಕೊಂಡು ಬರುತ್ತಿರುವುದನ್ನು ನೋಡಿದೆವು. ಸದರಿ ಆರೋಪಿತರನ್ನು ಕತ್ತಲಲ್ಲಿ ಬೆನ್ನಟ್ಟಿದಾಗ ಅವರು ಓಡಿ ಹೋಗಿದ್ದು ಇರುತ್ತದೆ. ಹಿಂತಿರುಗಿ ವಾಪಸ್ಸು ಗಾಡಿಯ ಹತ್ತಿರ ಬಂದಾಗ ಎರಡು ಎತ್ತುಗಳ ಪೈಕಿ ಒಂದು ಎತ್ತು ಇದ್ದು ಇನ್ನೊಂದು ಎತ್ತು ಪರಾರಿಯಾಗಿತ್ತು. ಗಾಡಿಯಲ್ಲಿದ್ದ ಮೂರು ಬೀಟೆ ತುಂಡುಗಳ ಮೇಲೆ ಇಲಾಖಾ ಛಾಪಾ ಇಲ್ಲದೆ ಇದ್ದುದರಿಂದ ಸದರಿ ಬೀಟೆ ತುಂಡುಗಳು, ಟೈರ್‌ಗಾಡಿ, ಎತ್ತನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ದಾಖಲಿಸಲಾಗಿತ್ತು ಎಂಬುದಾಗಿ ನುಡಿದಿರುತ್ತಾರೆ. ಹಾಗೂ ಸದರಿ ದಿನದಂದೇ ಜಪ್ತು ಪಡಿಸಿದ ಟೈರುಗಾಡಿಯಲ್ಲಿದ್ದ ಮೂರು ಬೀಟೆ ತುಂಡುಗಳನ್ನು ಗಾಡಿ ಸಮೇತ ಒಂದು ನೊಗಕ್ಕೆ ಎತ್ತನ್ನು

ಇನ್ನೊಂದು ಕಡೆ ನೊಗವನ್ನು ಸಿಬ್ಬಂದಿಗಳು ಹಿಡಿದು ಚಲಿಸಿಕೊಂಡು ಗಾಜನೂರು ವಲಯ ಕಛೇರಿ ಆವರಣಕ್ಕೆ ತರಲಾಗಿರುತ್ತದೆ. ಸದರಿ ಗಾಡಿಯಲ್ಲಿ ಸುಮಾರು ಮೂರು ತುಂಡುಗಳು ಇದ್ದವು ಎನ್ನುವುದು ನಿಜವಲ್ಲ ಎನ್ನುವುದು ಸುಳ್ಳು. ಗಾಜನೂರು ಸಮೀಪದ ಹೊಸಕೊಪ್ಪ ವಾಸಿ ಜಯಣ್ಣ ಹಾಗೂ ನನ್ನ ನಡುವೆ ಸೌದೆ ತರುವ ವಿಚಾರ ಮತ್ತು ಅರಣ್ಯ ಭೂಮಿ ಒತ್ತುವರಿ ಮಾಡಿಕೊಂಡಿರುವ ಕಾರಣಕ್ಕಾಗಿ ಈ ಪ್ರಕರಣ ದಾಖಲಿಸಿರುವುದು ಸುಳ್ಳು ಮತ್ತು ಬೀಟೆ ತುಂಡುಗಳನ್ನು ಅರ್ಜಿದಾರರ ಗಾಡಿಯಲ್ಲಿ ಹೇರಿ ಸುಳ್ಳು ಕೇಸು ಹಾಕಲಾಗಿರುತ್ತದೆ ಎನ್ನುವುದು ಸುಳ್ಳು ಎಂದು ನಿರಾಕರಿಸಿರುತ್ತಾರೆ.

ಆದ್ದರಿಂದ ಅಭಿಯೋಗವು ಮೇಲೆ ತಿಳಿಸಿದ ಸಾಕ್ಷ್ಯಗಳ ಸಾಕ್ಷ್ಯದಿಂದ ದಿನಾಂಕ: 15.10.2001 ರಂದು ಅರ್ಜಿದಾರರ ಟೈರ್‌ಗಾಡಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಸಕ್ರೆಬೈಲ್ ವನ್ಯಜೀವಿ ವಲಯದ ಸಿಬ್ಬಂದಿಗಳು ಜಪ್ತು ಮಾಡಿರುತ್ತಾರೆಂದು ಮತ್ತು ಸದರಿ ಟೈರ್‌ಗಾಡಿ ಕಾನೂನು ಭಾಹಿರವಾಗಿ ಅರಣ್ಯ ಉತ್ಪತ್ತಿಯ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿರುತ್ತದೆಂದು ಅಭಿಯೋಗವು ತೃಪ್ತಿಕರವಾಗಿ ಸಿದ್ಧಪಡಿಸಿದೆ ಎಂದು ದೃಢಪಟ್ಟಿರುವುದರಿಂದ ಪರಿಶೀಲನಾಂಶ 1ನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಅಂಶ–2:** ಟೈರ್ ಗಾಡಿಯ ಮಾಲೀಕರಾದ ಶ್ರೀ ಜಯಣ್ಣ ಬಿನ್ ಮಂಜಪ್ಪ ಇವರು ದಿನಾಂಕ: 29.10.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಕೀಲರ ಮೂಲಕ ವಿಚಾರಣೆಗೆ ಉತ್ತರ ನೀಡುತ್ತಾ ದಿನಾಂಕ: 15.10.2001 ರಂದು ಗಾಡಿಯನ್ನು ಊರಿನ ಅಯ್ಯಪ್ಪ ಸ್ವಾಮಿ ಕಮೀಟಿಯವರು ಸೌದೆ ತರಲು ತೆಗೆದುಕೊಂಡು ಹೋಗಿ ಸಂಜೆ 5.00 ಗಂಟೆಯ ನಂತರ ನಮ್ಮ ಮನೆ ಹತ್ತಿರ ನಿಲ್ಲಿಸಿದ್ದರು. ತದನಂತರ ನಾನು ಶಿವಮೊಗ್ಗಕ್ಕೆ ಹೋಗಿ ವಾಪಸ್ಸು ರಾತ್ರಿ 9.30ಕ್ಕೆ ಬಂದಾಗ ನನ್ನ ಹೆಂಡತಿ ಎತ್ತುಗಳನ್ನು ಸಮೇತ ಗಾಡಿಯನ್ನು ತೆಂಗಿನ ಗರಿಯನ್ನು ತರಲು ಅಯ್ಯಪ್ಪಸ್ವಾಮಿ ದೇವಸ್ಥಾನದ ಕಮೀಟಿಯವರು ತೆಗೆದುಕೊಂಡು ಹೋಗಿದ್ದಾರೆಂದು ಹೇಳಿದರು. ಮಾರನೇ ದಿವಸ ನನ್ನ ಎತ್ತಿನ ಗಾಡಿಯನ್ನು ಗಾಜನೂರಿನ ಅರಣ್ಯಾಧಿಕಾರಿಗಳು ಬೀಟೆ ತುಂಡುಗಳ ಸಂಬಂಧ ಜಪ್ತು ಪಡಿಸಿರುವ ವಿಚಾರ ತಿಳಿಯಿತು. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ನನ್ನ ಮೇಲೆ ಆಗಲಿ ಅಥವಾ ಬೇರೆಯವರ ಮೇಲೆ ಆಗಲಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿರುವುದಿಲ್ಲ ವೆಂದು ತಿಳಿಸುತ್ತಾ ಗಾಡಿ ಮತ್ತು ಎತ್ತನ್ನು ಬಿಟ್ಟು ಕೊಡುವಂತೆ ಕೋರಿಕೊಂಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರ ಪಾಟಿ ಸವಾಲಿಗೆ ಉತ್ತರಿಸುತ್ತಾ ಅಯ್ಯಪ್ಪ ಸ್ವಾಮಿ ಕಮೀಟಿಯವರು ಸೌದೆ ತರಲು ನನ್ನ ಗಾಡಿಯನ್ನು ತೆಗೆದುಕೊಂಡು ಹೋದಾಗ ನಾನು ಅವರ ಜೊತೆ ಹೋಗಿರಲಿಲ್ಲ ಶಿವಮೊಗ್ಗದಿಂದ ವಾಪಸ್ಸು ಮನೆಗೆ ಬಂದು ಗಾಡಿ ಎತ್ತಿನ ಬಗ್ಗೆ ನನ್ನ ಹೆಂಡತಿಯನ್ನು ವಿಚಾರಿಸಿದಾಗ ಅಯ್ಯಪ್ಪಸ್ವಾಮಿ ಸದಸ್ಯರು ಗಾಡಿಯನ್ನು ತೆಗೆದುಕೊಂಡು ಹೋಗಿದ್ದು ಹೋದವರ ಹೆಸರು ಅವರಿಗೆ ತಿಳಿದಿರಲಿಲ್ಲ. ಮಾರನೆ ದಿವಸ ನಾನು ಅಯ್ಯಪ್ಪಸ್ವಾಮಿ ದೇವಸ್ಥಾನದ ಕಮಿಟಿಯವರನ್ನು ಎತ್ತು, ಗಾಡಿಯ ಬಗ್ಗೆ ವಿಚಾರಿಸಲಿಲ್ಲ. ಕಾರಣ ಅರಣ್ಯ ಇಲಾಖೆಯವರು ನನ್ನ ಎತ್ತು ಗಾಡಿಯನ್ನು ಜಪ್ತು ಮಾಡಿದ ವಿಚಾರ ನನಗೆ ತಿಳಿದು ಬಂದಿತ್ತು. ನಮ್ಮ ಊರಿನಲ್ಲಿ ಅಯ್ಯಪ್ಪ ಸ್ವಾಮಿಯ ದೇವಸ್ಥಾನ ಕಟ್ಟುವ ಕೆಲಸ ನಡೆಯುತ್ತಿತ್ತು. ನಾನು ಆ ಸಮಿತಿಯ ಸದಸ್ಯನಾಗಿರಲಿಲ್ಲ. ದೇವಸ್ಥಾನ ಕಟ್ಟಲು ಯಾವುದೇ ಇಲಾಖೆಯಿಂದ ಪರವಾನಿಗೆ ಪಡೆದಿದ್ದು ನನಗೆ ಗೊತ್ತಿಲ್ಲ. ದಿನಾಂಕ: 15.10.2001 ರಂದು ಶಿವಮೊಗ್ಗಕ್ಕೆ ಬಂದಿರಲಿಲ್ಲ ಎನ್ನುವುದು ನಿಜವಲ್ಲ, ದೇವಸ್ಥಾನದ ಕಮಿಟಿಯವರಿಗೆ ನಾನು ನನ್ನ ಎತ್ತು ಗಾಡಿಯನ್ನು ನನ್ನ ತಿಳುವಳಿಕೆಯಿಂದ ಕೊಟ್ಟಿದ್ದೇನೆ ಎನ್ನುವುದು ನಿಜವಲ್ಲ. ಸತೀಶ್ ವನಪಾಲಕರ ಪರಿಚಯ ನನಗೆ ಇದ್ದು, ನನಗೆ ಅವರಿಗೆ ಯಾವ ವೈಮನಸ್ಸು ಇಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರು ಪ್ರಾಧಿಕಾರದಲ್ಲಿ ನೀಡಿದ ಹೇಳಿಕೆಗಳು ಮತ್ತು ಇವರು ನೀಡಿದ ದಾಖಲೆಗಳು ವ್ಯತಿರಿಕ್ತವಾಗಿದ್ದು ಅವರ ಹೇಳಿಕೆಯು ಬಹಳಷ್ಟು ಅನುಮಾನಸ್ಪದವಾಗಿ ಕಂಡು ಬಂದಿರುತ್ತದೆ. ಪರಿಶೀಲಿಸಿದಾಗ ಈ ಕೆಳಗಿನ ಅಂಶಗಳು ಕಂಡು ಬಂದಿರುತ್ತದೆ.

1. ಗಾಡಿಯ ಮಾಲೀಕರೆಂದು ಶ್ರೀ ಜಯಣ್ಣ ಬಿನ್ ಮಂಜಪ್ಪ ರವರು ದಿನಾಂಕ: 18.10.2001 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ ಘಟನೆ ನಡೆದ ದಿನದಂದು ಹೊಸ ಕೊಪ್ಪ ಗ್ರಾಮದ ಜನರಿಗೆ ದಸರಾ ಉತ್ಸವಕ್ಕಾಗಿ ಕಾಡು ಜಾತಿಯ ಸೌದೆಯನ್ನು ತರಲು ಎತ್ತು ಮತ್ತು ಗಾಡಿಯನ್ನು ಕೊಡಲಾಗಿತ್ತು. ಕೊಡುವ ಮುನ್ನ ಬೀಟೆ, ಶ್ರೀಗಂಧದ ಜಾತಿಯ ಮರಗಳನ್ನು ತರಬಾರದೆಂದು ತಿಳಿಸಲಾಗಿದ್ದರೂ ಎತ್ತು ಗಾಡಿಯನ್ನು ತೆಗೆದುಕೊಂಡು ಹೋದ ಅಸಾಮಿಗಳು ಮರದ ಜಾತಿಯ ಮಾಹಿತಿ ತಿಳಿಯದೆ ಕಾಡು ಜಾತಿಯ ಮರವೆಂದು ಭಾವಿಸಿ ತರುತ್ತಿದ್ದಾಗ ಅರಣ್ಯ ಇಲಾಖೆಯವರು ಪ್ರಕರಣ ದಾಖಲಿಸಿರುತ್ತಾರೆಂದು ತಿಳಿಸಿರುತ್ತಾರೆ. ಆದರೆ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುವಾಗ ಅರ್ಜಿದಾರರು ಅಯ್ಯಪ್ಪ ಸ್ವಾಮಿಯ ಕಮಿಟಿಯವರು ಸೌದೆ ತರಲು ಎತ್ತು ಗಾಡಿಯನ್ನು ತೆಗೆದುಕೊಂಡು ಹೋಗಿ ವಾಪಸ್ಸು ಸಂಜೆ 5.00 ಗಂಟೆಯ ಸಮಯದಲ್ಲಿ ನಮ್ಮ ಮನೆ ಹತ್ತಿರ ನಿಲ್ಲಿಸಿರುತ್ತಾರೆಂದು ಹೇಳಿಕೆ ನೀಡಿರುತ್ತಾರೆ. ಈ ವಿಚಾರವನ್ನು ದಿನಾಂಕ: 18.10.2001 ರಂದು ಪ್ರಾಧಿಕಾರಕ್ಕೆ ನೀಡಿದ ಅರ್ಜಿಯಲ್ಲಿ ತಿಳಿಸಬಹುದಾಗಿದ್ದರೂ ಇದನ್ನು ತಿಳಿಸದೆ ಇರುವುದು ಸಂಶಯಕ್ಕೆ ಎಡೆ ಮಾಡಿಕೊಡುತ್ತದೆ.
2. ಇದೇ ರೀತಿ ಎತ್ತು ಮತ್ತು ಗಾಡಿಯನ್ನು ಮನೆ ಹತ್ತಿರ ಬಿಟ್ಟು ಹೋದ ಮೇಲೆ ಪುನಃ ಅಯ್ಯಪ್ಪ ಸ್ವಾಮಿ ಕಮಿಟಿಯವರು ಎತ್ತು, ಗಾಡಿಯನ್ನು ತೆಗೆದುಕೊಂಡು ಹೋಗಿದ್ದಾರೆಂದು ಅವರ ಪತ್ನಿ ತಿಳಿಸಿದ ಮೇಲೆ ಮಾರನೆ ದಿನ ಅರಣ್ಯ ಇಲಾಖೆ ಸುಪರ್ಧಿನೊಳಗೆ ಎತ್ತು ಮತ್ತು ಗಾಡಿ ಬೀಟೆ ತುಂಡುಗಳೊಂದಿಗೆ ಇದ್ದಾಗ ಸೌದೆ ತರಲು ಎತ್ತು ಗಾಡಿಯನ್ನು ಕೊಟ್ಟ ಸಂದರ್ಭದಲ್ಲಿ ಇದ್ದ ಪರಿಚಿತ ಅಯ್ಯಪ್ಪ ಸ್ವಾಮಿ ಕಮಿಟಿಯ ಸದಸ್ಯರನ್ನು ವಿಚಾರಣೆ ಮಾಡಿ ಸಂಬಂಧಿಸಿದವರ ವಿರುದ್ಧ ದೂರು ಕೊಡಬಹುದಾಗಿತ್ತು. ಇದನ್ನು

ಮಾಡಿರುವುದಿಲ್ಲ. ಇದನ್ನೆಲ್ಲಾ ಗಮನಿಸಿದರೆ ಅರ್ಜಿದಾರರಿಗೆ ತಿಳಿದೆ ಈ ಕೃತ್ಯ ನಡೆದಿರುತ್ತದೆಂದು ನಿಸ್ಸಂಶಯವಾಗಿ ಸ್ಪಷ್ಟ ಪಡುತ್ತದೆ. ಟೈರ್ ಗಾಡಿಯನ್ನು ಅಯ್ಯಪ್ಪ ಸ್ವಾಮಿ ಕಮಿಟಿಯವರು ತೆಗೆದುಕೊಂಡು ಹೋಗಿದ್ದೆಯಾದರೆ ಕಮಿಟಿಯವರನ್ನು ಈ ನ್ಯಾಯಾಲಯಕ್ಕೆ ಸಾಕ್ಷಿಗೆ ಹಾಜರ್ ಪಡಿಸಿ ಸತ್ಯವನ್ನು ಹೇಳಿಸಬಹುದಿತ್ತು. ಸದರಿ ಕಮಿಟಿಯವರನ್ನು ವಿಚಾರಣೆಗೆ ಒಳಪಡಿಸಿದ್ದರೆ ಸತ್ಯ ಹೊರ ಬೀಳುವುದರಲ್ಲಿ ಸಂಶಯವೇ ಇರಲಿಲ್ಲ. ಇದು ಕೂಡ ಒಂದು ಲೋಪವೆಂದು ಭಾವಿಸುತ್ತೇನೆ.

3. ಅರ್ಜಿದಾರರು ದಿನಾಂಕ: 18.10.2001 ರಂದು ಪ್ರಾಧಿಕಾರಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಶಿವಮೊಗ್ಗಕ್ಕೆ ಬಂದ ವಿಷಯದ ಬಗ್ಗೆ ಪ್ರಸ್ತಾಪಿಸಿರುವುದಿಲ್ಲ. ಆದರೆ ದಿನಾಂಕ: 29.10.2005 ರಂದು ಹೇಳಿದ ಸಾಕ್ಷ್ಯದಲ್ಲಿ ತಾನು ಶಿವಮೊಗ್ಗಕ್ಕೆ ಬಂದಾಗ ಈ ಕೃತ್ಯ ನಡೆದಿರುತ್ತದೆಂದು ತಿಳಿಸಿರುತ್ತಾರೆ. ಇದು ಪೂರ್ಣ ಸಂಶಯಕ್ಕೆ ಎಡೆ ಮಾಡಿದೆ. ಕಾರಣ ಆ ದಿನ ಶಿವಮೊಗ್ಗಕ್ಕೆ ಬಂದಿದ್ದೆ, ಯಾವ ಉದ್ದೇಶಕ್ಕಾಗಿ ಬಂದೆ ಎಂಬುದರ ಬಗ್ಗೆಯಾಗಲಿ ಅಥವಾ ಶಿವಮೊಗ್ಗಕ್ಕೆ ಬಂದ ಬಗ್ಗೆ ಸಾಕ್ಷಿಗಳನ್ನು ಹಾಜರ್ ಪಡಿಸಬಹುದಿತ್ತು. ಹೀಗೆ ಮಾಡದೆ ಇರುವುದರಿಂದ ಅವರು ಶಿವಮೊಗ್ಗಕ್ಕೆ ಬಂದಿರುವುದಿಲ್ಲ ಬದಲಾಗಿ ಕೃತ್ಯ ನಡೆದ ಸ್ಥಳದಲ್ಲಿ ಅವರಿದ್ದು ಅಭಿಯೋಜನಾ ಪರ ನಿಶಾನೆ–1 ಮಹಜರ್‌ನಲ್ಲಿ ಅಸಾಮಿಗಳು ತಪ್ಪಿಸಿಕೊಂಡಿರುತ್ತಾರೆಂಬುದು ತಿಳಿಸಿರುವುದರಿಂದ ಅರ್ಜಿದಾರರು ಆರೋಪಿತರಾಗಿದ್ದಾರೆಂದು ಭಾವಿಸಬೇಕಾಗುತ್ತದೆ. ಅಲ್ಲದೇ ಅರ್ಜಿದಾರರು ಕೃತ್ಯ ನಡೆದ ದಿನ ಹೊಸ ಕೊಪ್ಪದಲ್ಲಿ ಇರಲಿಲ್ಲವೆಂದು ಒಪ್ಪಿಕೊಳ್ಳಲು ಸಾಧ್ಯವಿರುವುದಿಲ್ಲ.

ಮೇಲ್ಕಂಡ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಯಿಂದಲೆ ಈ ಕೃತ್ಯ ನಡೆದಿದ್ದು, ಈ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಇವರು ಭಾಗಿಯಾಗಿರುವುದಾಗಿ ಸ್ಪಷ್ಟವಾಗುತ್ತದೆ. ಅರ್ಜಿದಾರರ ಗಮನಕ್ಕೆ ಬಾರದೆ ಈ ಮೇಲ್ಕಂಡ ಪ್ರಕರಣ ನಡೆದಿದೆ ಎನ್ನುವುದು ಯಾವುದೇ ಸಾಕ್ಷ್ಯಾಧಾರದಿಂದಲೂ ರುಜುವಾತು ಪಡಿಸಿರುವುದಿಲ್ಲ. ಆದ್ದರಿಂದ ಅಂಶ–2ಕ್ಕೆ ನಕಾರಾತ್ಮಕವಾಗಿ ಉತ್ತರಿಸುತ್ತ ಅಂಶ–3ಕ್ಕೆ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ.ಎ.ಎನ್. ಕರ್ಕಿಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು 1963ರ ಕರ್ನಾಟಕ ಅರಣ್ಯ ಕಾಯಿದೆ 71(ಎ) ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಒಂದು ಟೈರಿನ ಗಾಡಿ, ಒಂದು ಎತ್ತು 3 ಬೀಟೆ ತುಂಡುಗಳು 0.654 ಘ.ಮೀ. ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ. ಸದರಿ ಒಂದು ಟೈರ್ ಗಾಡಿ, ಒಂದು ಎತ್ತು 3 ಬೀಟೆ ತುಂಡುಗಳು 0.654 ಘ.ಮೀ. ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಅರ್ಜಿದಾರರು ಮಧ್ಯಂತರ ಬಿಡುಗಡೆ ಕಾಲಕ್ಕೆ ಬರೆದುಕೊಟ್ಟ ಎಲ್ಲಾ ಭದ್ರತೆಗಳು ರದ್ದಾಗಿರುತ್ತದೆ. ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗಾಗಿ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವನ್ನು ದಿನಾಂಕ: 29.09.2006 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಜಿ.ಎ.ಎನ್. ಕರ್ಕಿಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಅನುಬಂಧ**

**ಅಭಿಯೋಜನ ಪರ ಸಾಕ್ಷಿ**

1. ಶ್ರೀ ಎ.ವಿ. ಸತೀಶ್, ಹಿಂದಿನ ವನಪಾಲಕರು, ಸಕ್ರೆಬೈಲ್ ವನ್ಯಜೀವಿ ವಲಯ, ಗಾಜನೂರು – ಪಿಡಬ್ಲ್ಯೂ– (ಅಭಿಯೋಜನಾ ಪರ)

**2. ನಿಶಾನಿಸಲ್ಪಟ್ಟ ದಾಖಲೆಗಳು:**

| | | | |
|---|---|---|---|
| 1. | ಸ್ಥಳ ಮಹಜರ್ | : | ನಿಶಾನೆ ಪಿ – 1 |
| 2. | ಪ್ರಥಮ ಮಾಹಿತಿ ವರದಿ | : | ನಿಶಾನೆ ಪಿ – 2 |
| 3. | ಟೈರ್ ಗಾಡಿ | : | ಎಮ್‌ಓ – 1 |
| 4. | 3 ಬೀಟೆ ತುಂಡುಗಳು 0.654 ಘ.ಮೀ. | : | ಎಮ್‌ಓ – 2 ರಿಂದ 4 |

**3. ಅರ್ಜಿದಾರರ ಪರ ಸಾಕ್ಷಿ ಹಾಗೂ ಗುರುತಿಸಲ್ಪಟ್ಟ ದಾಖಲೆಗಳು:**

1. ಶ್ರೀ ಜಯಣ್ಣ ಬಿನ್ ಮಂಜಪ್ಪ, ಹೊಸಕೊಪ್ಪ ಗ್ರಾಮ ಡಿಡಬ್ಲ್ಯೂ – 1

4. ಅರ್ಜಿದಾರರ ಪರ ಗುರುತಿಸಲ್ಪಟ್ಟ ದಾಖಲೆಗಳು ಯಾವುದು ಇರುವುದಿಲ್ಲ.

**ಜಿ.ಎ.ಎನ್. ಕರ್ಕಿಕರ್**
ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 1551

**IN THE BEFORE THE COURT OF THE ASSISTANT REGISTRAR OF CO-OPERATIVE SOCIETIES-II CIRCLE AND RECOVERY OFFICER, MALLESWARAM, BANGALORE-3**
**C.E.P/ARE/UBF/1219-1220/JR/2006-07**

**Between:**

Sir.M. Visvesvaraya Co-operative Bank Limited,
No.109, Shankarmutt Road,
Shankarpuram, Bangalore-560 004
Represented by its Chief Executive Officer **Decree Holder**

And

01. Smt. C.N. Swarnalatha,
M/s Tejaswini Industries, No.180, Raghavendra Layout,
22nd Main Road, 4th Cross, Padmanabhanagar, Bangalore-70
02. Sri C.S. Nagaraj,
No.180, Raghavendra Layout, 22nd Main Road,
4th Cross, Padmanabhanagar, Bangalore-70
03. Sri. Arun Kumar
M/s Musti Designs, Sundaraya Industries, Area Tember Yard Layout,
Mysore Road, Bangalore-560 026
04 Sri. C.S. Jaykar, Punjab National Bank Chickpet, Bangalore-560 026
05. Sri Venkataramanappa,
No.8:1, 111th Cross, Cubbonpet Bangalore-560 002
06. Smt. V. Shakuntala,
No.34, Ankappa Block, M.R.Palya, Bangalore-560 006
07. Smt. Padmavathi, No.34, Ankappa Block, M.R.Palya, Bangalore-560 006
08. Sri V. Timaraju, Andal Nilayam, Maruthi Nagar, Hosur, Tamilnadu. **Judgement Debtors.**

**ATTACHMENT OF IMMOVABLE PROPERTY**

(Under Section 101(1)(C) of the Karnataka Co-operative Societies Act, 1959)

The Decree holder above has made an application before this Court invoking its jurisdiction under section 101(1)(C) of the Karnataka Co-operative Societies Act, 1959 seeking attachment of the immovable property belonging to the forth judgement debtor Sri C.S. Jaykar for realization of the award amount.

Whereas it is brought to my notice by the decree holder Bank by an application filed under section 101(1)(C) of the Karnataka Co-operative Societies Act, 1959, that the Judgement debtors have availed the Working Capital loan and Term Loan facilities from the decree holder Bank. On default the repayment of the loan amount, the decree holder has referred the dispute for arbitration. On perusal of the, records placed on record in the matter the Joint Registrar of Co-operative Societies, Bangalore Division-1, Bangalore have passed an award against the judgement debtors directing them to pay a sum of Rs.11,69,180.00 plus further interest from 01.04.1997 at the rate of 23% to the decree holder forthwith by his order dated: 12.02.2002 his file in dispute No.JRD/DIS/137/1997-98 and No.JRD/DIS/138/1997-98.

The Decree Holder in the affidavit filed along with the application has stated that the above judgement debtors have not complied with the above order passed by the Joint Registrar of Co-operative Societies, till date of filing of the above application. It is also pleaded that the property mortgaged with the Bank by the Decree Holder is already in dispute for attachment and sale. The Decree Holder has identified an alternative immovable property standing in the name of the forth Judgement Debtor Sri C.S. Jaykar, property bearing No.90, Khatha No.364, Assessment No.258, out of converted Sy.No.46, Kalena Agrahara Village, Begur Hobli, Bangalore South Taluk, measuring East to West 30 feet and North to South 40 feet. The only way out for the Decree Holder to realize the dues is from selling of the Immovable Property belonging to the Judgement Debtor No.4.

Whereas the Decree holder Bank has further stated that there is likelihood of Judgement Debtor disposing of the property to cause wrongful loss to the decree holder, if the order of attachment is not passed immediately. The description of the property to be attached has been furnished.

I have gone through the entire records in the above matter and I am of the considered opinion that the decree holder has made out a clear case for passing an order of attachment in respect of the property described in the schedule hereunder and I pass the following order.

**ORDER**

In the circumstances explained above and in exercise of powers vested in me Section 101(1)(C) of the Karnataka Co-operative Societies Act, 1959, I Sadashivaiah. The Assistant Registrar of Co-operative Societies and Recovery Officer, II Circle Bangalore, do hereby order the attachment of the Immovable property of Judgement Debtor No.4. mentioned in the schedule hereunder.

**SCHEDULE OF PROPERTIES**

All the piece and parcel of the property bearing situated at No.90, Khatha No.364, Assessment No.258, out of converted Sy.No.46, vide order No. B.DIS.ALN.SR.(S) 297/92-93 dated: 11.03.1993 from the Special Deputy Commissioner, Bangalore District in KALENA AGRAHARA VILLAGE Begur Hobli, Bangalore South Taluk, measuring East to West 30 feet and North to South 40 feet and bounded on the:-

| | | |
|---|---|---|
| East by | : | Property No.93 |
| West by | : | Passage |
| North by | : | Road |
| South by | : | Property No.89 |

and registered as document No. BNG (U)-BLR(S)/5823/97-98-14-14 of 1997-98 dated: 06.07.1998 in the office of the sub Registrar Bangalore South Taluk, Bangalore.

Given under my hand and the seal of this court on this the 27th day October 2006.

Bangalore:
Date: 27.10.2006
P.R. 1578

Assistant registrar of Co-operative Societies and Recovery Officer, Bangalore II Circle, Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-28/2006-07, ದಿನಾಂಕ: 12ನೇ ಅಕ್ಟೋಬರ್ 2006**

**ವಿಷಯ:** ಸ್ಥಗಿತಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಕಮಂಡಲಗುಂದಿ ಜಗಳೂರು ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪತ್ರ ದಿನಾಂಕ: 26.7.2006.
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 10.8.2006
3) ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ದಿನಾಂಕ: 3.10.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಸದರಿ ನೋಟೀಸನ್ನು ಸಂಬಂಧಿಸಿದ ನಿರ್ದೇಶಕರಿಗೆ ಜಾರಿ ಮಾಡಿಸಿ ಸ್ವೀಕೃತಿ ವರದಿಯನ್ನು ಉಲ್ಲೇಖ (3) ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರು ಸಲ್ಲಿಸಿರುತ್ತಾರೆ. ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಕಮಂಡಲಗುಂದಿ ಜಗಳೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಜಗಳೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 12.10.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1582

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಮಂಗಳೂರು ವಿಭಾಗ, ಮಂಗಳೂರು**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–105/2006 ಎಫ್, ದಿನಾಂಕ: 30ನೇ ಅಕ್ಟೋಬರ್ 2006**

**ಅರ್ಜಿದಾರರು:**
1) ಶ್ರೀಮತಿ ಲ್ಯಾಸ್ಸಮ್ಮ ಕೋಂ ಲೇಟ್ ಜಾನ್‌ಸನ್ ಕೆ.ಜಿ.
2) ನವೀನ್ ಜಾರ್ಜ್ ಕೆ.ಜಿ. ಬಿನ್ ಲೇಟ್ ಜಾನ್‌ಸನ್ ಕೆ.ಜಿ.
3) ನಿತೀನ್ ಜಾರ್ಜ್ ಕೆ.ಜಿ. ಬಿನ್ ಲೇಟ್ ಜಾನ್‌ಸನ್ ಕೆ.ಜಿ.
4) ನಿಶಮಿತ ಅನ್ನಮ್ಮ ಕೆ.ಜಿ. ಬಿನ್ ಲೇಟ್ ಜಾನ್‌ಸನ್ ಕೆ.ಜಿ.
ವಾಸ: ಕುಡುನ್‌ತರಿಲ್ ಹೌಸ್, ಕೊಪ್ಪಮ್, ನೆಲ್ಯಾಡಿ ಪೋಸ್ಟು ಮತ್ತು ವಿಲೇಜ್, ಪುತ್ತೂರು ತಾಲ್ಲೂಕು.
5) ಕೆ.ಸಿ. ಜಾರ್ಜ್ ಬಿನ್ ಲೇಟ್ ಡ್ಯಾನಿಲ್
ವಾಸ: ಅಮೃತ್ ನಿಲಯ, 3ನೇ ಕ್ರಾಸ್, ಬಾಬುಜಿ ನಗರ್, ಶಿವಮೊಗ್ಗ ಜಿಲ್ಲೆ.

**ಪ್ರತಿವಾದಿಗಳು:**
1. ಶ್ರೀ ಎನ್. ಮೊಹಮ್ಮದ್
ಬಿನ್ ಎನ್.ಇಸುಬು,
ಶಾಂತಿಬೆಟ್ಟು ಹೌಸ್, ನೆಲ್ಯಾಡಿ ಪೋಸ್ಟು,
ಪುತ್ತೂರು ತಾಲ್ಲೂಕು.
2. ದಿ ಓರಿಯಂಟಲ್ ಇನ್ಶೂರೆನ್ಸ್
ಕಂಪೆನಿ ಲಿ., ಬ್ರಾಂಚ್ ಆಫೀಸ್, ಕೃಷ್ಣ
ಪ್ರಸಾದ್ ಬಿಲ್ಡಿಂಗ್, ಮೈನ್ ರೋಡ್,
ಪುತ್ತೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಲ್ಯಾಸ್ಸಮ್ಮ ಇವರು ತಮ್ಮ ಗಂಡನಾದ ಶ್ರೀ ದಿ. ಜಾನ್‌ಸನ್ ಕೆ.ಜಿ. ಇವರು 1ನೇ ಪ್ರತಿವಾದಿಗಳಾದ ಎನ್. ಮೊಹಮ್ಮದ್, ಶಾಂತಿಬೆಟ್ಟು, ನೆಲ್ಯಾಡಿ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 28.05.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**
ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 1585

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಮಂಗಳೂರು ವಿಭಾಗ, ಮಂಗಳೂರು**
**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–106/2006 ಎಫ್, ದಿನಾಂಕ: 30ನೇ ಅಕ್ಟೋಬರ್ 2006**

**ಅರ್ಜಿದಾರರು:**
1) ಶ್ರೀ ಅವಿನಹಳ್ಳಿ ಶೇಖರಪ್ಪ ಬಿನ್ ಫಕೀರಪ್ಪ
2) ಶ್ರೀಮತಿ ವೇದಾವತಿ
ಕೋಂ ಶ್ರೀ ಅವಿನಹಳ್ಳಿ ಶೇಖರಪ್ಪ,
ವಾಸ: ಕೋಟೆಕೊಪ್ಪ, ನೀಚಡಿ ಅಂಚೆ,
ಸಾಗರ ತಾಲ್ಲೂಕು.

**ಪ್ರತಿವಾದಿಗಳು:**
1) ಥೋಮಸ್ ಜೆ. ಪೈಲಟ್, 5) ರಾಯ್ ಜೆ. ಪೈಲಟ್,
6) ಜೋಸೆಫ್ ಜೆ. ಪೈಲಟ್, 7) ರಾಜು ಜೆ. ಪೈಲಟ್
ಪಾಲುದಾರರು, ಮೆ: ಮೆರೈನ್ ಫುಡ್ ಪ್ಯಾಕರ್ಸ್
(ಫ್ಯಾಕ್ಟರಿ), ಬೈಕಂಪಾಡಿ ಇಂಡಸ್ಟ್ರಿಯಲ್ ಏರಿಯಾ,
ಮಂಗಳೂರು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಅವಿನಹಳ್ಳಿ ಶೇಖರಪ್ಪ, ಇವರು ತಮ್ಮ ಮಗನಾದ ಶ್ರೀ ದಿ.ಕೆ.ಎಸ್.ಅನಿಲ್ ಕುಮಾರ್ ಇವರು 1ನೇ ಪ್ರತಿವಾದಿಗಳಾದ ಮೆ: ಮೆರೈನ್ ಫುಡ್ ಪ್ಯಾಕರ್ಸ್ (ಫ್ಯಾಕ್ಟರಿ) ಬೈಕಂಪಾಡಿ ಇಂಡಸ್ಟ್ರಿಯಲ್ ಏರಿಯಾ, ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 06.07.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು

ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1586

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–107/2006 ಎಫ್, ದಿನಾಂಕ: 30ನೇ ಅಕ್ಟೋಬರ್ 2006**

**ಅರ್ಜಿದಾರರು:**

1) ಶ್ರೀ ಶೇಸಪ್ಪ ಮೂಲ್ಯ
ಬಿನ್ ಲೇಟ್ ಲಿಂಗಪ್ಪ ಮೂಲ್ಯ
2) ಶ್ರೀಮತಿ ಕಾವೇರಿ, ಕೋಂ ಶೇಸಪ್ಪ ಮೂಲ್ಯ
ವಾಸ: ಉಪ್ಪಲ ಹೌಸ್, ನರಿಮೊಗರು
ಪೋಸ್ಟು ಮತ್ತು ವಿಲೇಜ್, ಪುತ್ತೂರು
ತಾಲ್ಲೂಕು.

**ಪ್ರತಿವಾದಿಗಳು:**

1) ಶ್ರೀ ಬಿ. ಶಿವಾನಂದ ಪೈ. ಬಿನ್ ಬಿ. ಆನಂದಪ್ಪ ಪೈ.,
ಸಿಲ್‌ವರ್ ಸ್ಟಾಂಡ್ ಅಪಾರ್ಟ್‌ಮೆಂಟ್, ಲೇಡಿಹಿಲ್
ಮಂಗಳೂರು ತಾಲ್ಲೂಕು.
2) ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ.,
ಪೋಲಿಮಾರ್ ಬಿಲ್ಡಿಂಗ್, ನೆಲ್ಲಿಕಾಯಿ ರೋಡ್,
ಮಂಗಳೂರು ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಶೇಸಪ್ಪ ಮೂಲ್ಯ ಇವರು ತಮ್ಮ ಮಗನಾದ ಶ್ರೀ ದಿ.ಮಂಜುನಾಥ್ ಯಾನೆ ಮಂಜಪ್ಪ ಇವರು 1ನೇ ಪ್ರತಿವಾದಿಗಳಾದ ಶ್ರೀ ಬಿ.ಶಿವಾನಂದ ಪೈ, ಸಿಲ್‌ವರ್ ಸ್ಟಾಂಡ್ ಅಪಾರ್ಟ್‌ಮೆಂಟ್, ಲೇಡಿಹಿಲ್ ಮಂಗಳೂರು, ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 15.08.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1587

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಮಂಗಳೂರು ವಿಭಾಗ, ಮಂಗಳೂರು**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್.ಆರ್–108/2006 ಎಫ್, ದಿನಾಂಕ: 30ನೇ ಅಕ್ಟೋಬರ್ 2006**

**ಅರ್ಜಿದಾರರು:**

1) ಶ್ರೀ ರಾಮಣ್ಣ ಗೌಡ,
ಬಿನ್ ಲೇಟ್ ಬರ್ಮಣ್ಣ ಗೌಡ,
2) ಶ್ರೀಮತಿ ಹೊನ್ನಮ್ಮ
ಕೋಂ ಶ್ರೀ ರಾಮಣ್ಣ ಗೌಡ,
ವಾಸ: ಹೌಸ್ ನಂ.1–107ಎ, ಸುಡ್ಲುಹೌಸ್,
ಬಿಳಿನೆಲೆ ವಿಲೇಜ್, ನೆಲ್‌ಟನ ಪೋಸ್ಟು,
ಪುತ್ತೂರು ತಾಲ್ಲೂಕು.

**ಪ್ರತಿವಾದಿಗಳು:**

1) ಶ್ರೀ ಬಿ. ಶಿವಾನಂದ ಪೈ. ಬಿನ್ ಬಿ. ಆನಂದಪ್ಪ ಪೈ.,
ಸಿಲ್‌ವರ್ ಸ್ಟಾಂಡ್ ಅಪಾರ್ಟ್‌ಮೆಂಟ್, ಲೇಡಿಹಿಲ್
ಮಂಗಳೂರು ತಾಲ್ಲೂಕು.
2) ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ.,
ಪೋಲಿಮಾರ್ ಬಿಲ್ಡಿಂಗ್, ನೆಲ್ಲಿಕಾಯಿ ರೋಡ್,
ಮಂಗಳೂರು ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ರಾಮಣ್ಣ ಗೌಡ, ಇವರು ತಮ್ಮ ಮಗನಾದ ಶ್ರೀ ದಿ. ಉಮೇಶ್ ಗೌಡ ಇವರು 1ನೇ ಪ್ರತಿವಾದಿಗಳಾದ ಶ್ರೀ ಬಿ.ಶಿವಾನಂದ ಪೈ, ಸಿಲ್‌ವರ್ ಸ್ಟಾಂಡ್ ಅಪಾರ್ಟ್‌ಮೆಂಟ್, ಲೇಡಿಹಿಲ್ ಮಂಗಳೂರು, ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 15.08.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ, ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಯಂ.ಎಸ್. ತಿಮ್ಮೋಲಿ**

ಪಿ.ಆರ್. 1588

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಗಳೂರು ವಿಭಾಗ, ಮಂಗಳೂರು.

**ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಪ್ರಕಟಣೆ ಸಂಖ್ಯೆ: ಕಾಇ:ಶಿವಿಶಿ:ರೆಸ:ಸಂಚಾರ ನಿಷೇಧ:2006–07, ದಿನಾಂಕ: 3ನೇ ನವೆಂಬರ್ 2006**

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕು ಹೊನ್ನಾಳಿ–ಬೈಂದೂರು (ನಗರ–ಕೊಲ್ಲೂರು) ರಾಜ್ಯ ಹೆದ್ದಾರಿ ಸಂಖ್ಯೆ: 26ರ ಸರಪಳಿ 98.80 ರಲ್ಲಿರುವ ಸೇತುವೆಯ ದಿನಾಂಕ: 3.11.2006 ರಂದು ಕುಸಿದು ಬಿದ್ದಿರುವುದರಿಂದ ರಸ್ತೆ ಸಂಪರ್ಕ ಕಡಿತವಾಗಿರುತ್ತದೆ. ಇದರಿಂದ ಸಾರ್ವಜನಿಕರಿಗೆ ಆಗಬಹುದಾದ ತೊಂದರೆಗೆ ಇಲಾಖೆಯು ವಿಷಾಧಿಸುತ್ತದೆ.

ರಾಜ್ಯ ಹೆದ್ದಾರಿ ಅಧಿನಿಯಮ 1964ರ ಸೆಕ್ಷನ್ 50 ರಲ್ಲಿ ದತ್ತವಾದ ಅಧಿಕಾರದಂತೆ, ಬಿ.ಟಿ.ಕಾಂತರಾಜ್, ಕಾರ್ಯಪಾಲಕ ಅಭಿಯಂತರರು ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಆದ ನಾನು ಮುಂದಿನ ಆದೇಶದವರೆಗೆ ರಸ್ತೆಯ ಹಾನಿಗೊಳಗಾದ ಭಾಗದಲ್ಲಿ ವಾಹನ ಸಂಚಾರವನ್ನು ಕೂಡಲೇ ಜಾರಿಗೆ ಬರುವಂತೆ ನಿಷೇಧಿಸಿರುತ್ತೇನೆ.

ಸಾರ್ವಜನಿಕರು ಬದಲಿ ರಸ್ತೆಯಾದ ನಗರ–ಮುಂಡಳ್ಳಿ–ಚಕ್ರನಗರ–ಸುಳಗೋಡು–ಬೈಸೆ ಮಾರ್ಗವಾಗಿ ಹೊನ್ನಾಳಿ–ಬೈಂದೂರು (ನಗರ–ಕೊಲ್ಲೂರು) ರಸ್ತೆಯ ಸರಪಳಿ 102.80 ರಲ್ಲಿ ಸೇರುವ ರಸ್ತೆಯಲ್ಲಿ ಸಂಚರಿಸಬೇಕಾಗಿ ಕೋರಲಾಗಿದೆ.

ಪಿ.ಆರ್. 1583

ಕಾರ್ಯಪಾಲಕ ಇಂಜಿನಿಯರ್ ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಪ್ರಾಧಿಕಾರ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ**

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು ಹಾಗೂ ಅಧ್ಯಕ್ಷರು ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಬಿಎಲ್ಆರ್–4/ಬಿಓಇ/ಸಿಆರ್–01/06–07, ದಿನಾಂಕ: 2ನೇ ನವೆಂಬರ್ 2006**

**ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯ ಅಧಿಸೂಚನೆ**

ದಿನಾಂಕ: 30.10.2006 ರಂದು ಮಂಡಳಿ ಸಭೆ ಸೇರಿ ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯನ್ನು 2007ನೇ ಸಾಲಿನ ಜನವರಿ ತಿಂಗಳಲ್ಲಿ ಅಂತ್ಯದಲ್ಲಿ ನಡೆಸಲು ನಿರ್ಧರಿಸಲಾಗಿದೆ.

ಆಸಕ್ತ ಅಭ್ಯರ್ಥಿಗಳು, ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಹತ್ತು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಸ್ವವಿಳಾಸವುಳ್ಳ ಲಕೋಟೆಯೊಂದಿಗೆ ಕಾರ್ಯದರ್ಶಿ, ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29, ಇವರಿಗೆ ಮನವಿ ಸಲ್ಲಿಸಿ ಪಡೆದುಕೊಳ್ಳಬಹುದು. ಪರೀಕ್ಷೆಗಾಗಿ ಕುಳಿತುಕೊಳ್ಳ ಬಯಸುವ ಅಭ್ಯರ್ಥಿಗಳು ಈ ಕೆಳಕಂಡಂತೆ ಕನಿಷ್ಠ ಅರ್ಹತೆ ಮತ್ತು ಅನುಭವ ಹೊಂದಿರಬೇಕಾಗಿರುತ್ತದೆ.

**ವಯೋಮಿತಿ, ವಿದ್ಯಾರ್ಹತೆ ಮತ್ತು ಅನುಭವ**

ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಗೆ ಕುಳಿತುಕೊಳ್ಳ ಬಯಸುವ ಅಭ್ಯರ್ಥಿಯ ವಯಸ್ಸು 23 ವರ್ಷಕ್ಕಿಂತ ಕಡಿಮೆ ಇರಬಾರದು ಹಾಗೂ

1. ಮಾನ್ಯತೆ ಪಡೆದ ಬಾಯ್ಲರ್‌ಗಳ ಮತ್ತು ಆ್ಯಕ್ಸಸರೀಸ್‌ಗಳನ್ನು ತಯಾರಿಸುವ ಅಥವಾ ದುರಸ್ತಿ ಮಾಡುವ ಕಾರ್ಯಗಾರದಲ್ಲಿ ಪೂರ್ಣ ಅವಧಿಯ ಅಪರೆಂಟಿಶಿಪ್ ಇಂಜಿನಿಯರ್ಸ್ ಕೋರ್ಸ್‌ಅನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

   ಅಥವಾ

   ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಇಂಡಿಯಾ) ಇವರಿಂದ ಮಾನ್ಯತೆ ಪಡೆದ ವಿದ್ಯಾಸಂಸ್ಥೆಯಿಂದ ಮೆಕ್ಯಾನಿಕಲ್ ಅಥವಾ ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ಪದವಿ ಅಥವಾ ಡಿಪ್ಲೋಮಾ ವಿದ್ಯಾರ್ಹತೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

2. ಎರಡು ಬಾಯ್ಲರ್‌ಗಳಿಗಿಂತ ಕಡಿಮೆ ಇರದ ಬಾಯ್ಲರುಗಳ ಸಮೂಹದಲ್ಲಿ ಮತ್ತು ಪ್ರತಿಯೊಂದು ಬಾಯ್ಲರಿನ ಹೀಟಿಂಗ್ ಸರ್ಫೇಸ್ ಒಂದು ಸಾವಿರ ಚದರ ಅಡಿಗಿಂತ ಕಡಿಮೆ ಇರದ ಬಾಯ್ಲರುಗಳಲ್ಲಿ ಕನಿಷ್ಠ ಎರಡು ವರ್ಷದ ಅವಧಿಗೆ ಅವುಗಳ ನಿರ್ವಹಣೆ ಮತ್ತು ಚಾಲನೆಯಲ್ಲಿ ಇಂಜಿನಿಯರ್ ಅಥವಾ ಸಹಾಯಕ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ ಅನುಭವ ಹೊಂದಿರಬೇಕು.

ಪರೀಕ್ಷೆಗೆ ಕುಳಿತುಕೊಳ್ಳುವ ಅಭ್ಯರ್ಥಿಗಳು ಪರೀಕ್ಷಾ ಶುಲ್ಕ ರೂ.150–00 ನ್ನು ಡಿ.ಡಿ. ಅಥವಾ ಪೇ ಆರ್ಡರ್ ಅಥವಾ ಚಲನ್ ಮುಖಾಂತರ ಸಂದಾಯ ಮಾಡಬಹುದು, ಡಿಡಿ ಅಥವಾ ಪೇ ಆರ್ಡರ್ ಅನ್ನು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಕರ್ನಾಟಕದಲ್ಲಿ, ಬೆಂಗಳೂರು ಅವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆಯತಕ್ಕದ್ದು. ಚಲನ್ ಮುಖಾಂತರ ಪರೀಕ್ಷಾ ಶುಲ್ಕವನ್ನು ಸಂದಾಯ ಮಾಡಿದಲ್ಲಿ "0230 ಕಾರ್ಮಿಕ ಮತ್ತು ಉದ್ಯೋಗ, 103 ಸ್ಟೀಮ್ ಬಾಯ್ಲರುಗಳ ಪರಿವೀಕ್ಷಣಾ ಶುಲ್ಕ" ಲೆಕ್ಕ ಶೀರ್ಷಿಕೆಯಲ್ಲಿ ಜಮ ಮಾಡತಕ್ಕದ್ದು. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದು.

ಭರ್ತಿ ಮಾಡಿದ ಅರ್ಜಿಗಳನ್ನು ಈ ಕಛೇರಿಯಲ್ಲಿ ಸ್ವೀಕರಿಸುವ ಕೊನೆಯ ದಿನಾಂಕ: 16.12.2006 ಇರುವುದು. ಅನಂತರ ತಲುಪಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಯದರ್ಶಿ,
ಬಾಯ್ಲರುಗಳ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ,
ಬೆಂಗಳೂರು.

## DEPARTMENT OF FACTORIES AND BOILERS

**Office of the Director of Factories and Boilers, and Chairman, Boiler Operation Engineers Examination Board, Karmika Bhavan, 2nd Floor, Near Dairy Circle, ITI Compound,Bannerghatta Road, Bangalore-29**

**No.BLR-4/BOE/CR-01/2006-07, Dated: 2nd November 2006**

**NOTIFICATION REGARDING BOILER OPERATION ENGINEERS EXAMINATION**

The Boiler Operation Engineers Examination Board in its meeting held on 30.10.2006 have decided to conduct next examination in the month of January 2007. The candidates who desired to appear for the said examination, may obtain the application form during the office hours or the same may be obtained from the Secretary, Boiler Operation Engineers Examination Board, Karmika Bhavan, 2nd Floor, Near Dairy Circle, ITI Compound, Bannerghatta road, Bangalore-560 029 by sending requisition with self addressed Rs.10/- postal stamp affixed envelope. The Qualification and Experience required for a candidate to appear for examination is as follows.

**Age, Qualification and Experience**

A candidate who desires to appear for boiler Operation Engineers Examination shall not be less than 23 years of age and shall not be admitted to the examination unless he proves to the satisfaction of the Chairman that he has successfully completed.

a) A full time apprentice engineer's course in a recognized workshop engaged in making or repairing of boilers and accessories.

Or

A degree or diploma in mechanical or electrical engineering recognized by the Institution of Engineers (India)

And

b) Served not less than two years as Engineer or Assistant Engineer in the running and maintenance of a battery of boilers not less than two in number and each of not less than One thousand square feet heating surface.

The candidate who desires to appear for examination shall pay an examination fees of Rs.150/- either through D.D. or Pay order or treasury challan. The D.D. or Pay order shall be drawn in favour of Director of Factories and Boilers in Karnataka, Bangalore, from any Nationalized Bank. If the fees is paid through treasury challan the same shall be credited to "0230 Labour and Employment, 103 Fee for Inspection of steam boilers" Head of account. Further detail if required may be obtained from this office.

The last date for receipt of duly filled application form is 16.12.2006.

Secretary,
Boiler Operation Engineers Examination Board, Bangalore.

P.R. 1584

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 13/ಡಿಸಿಪಿ/ಸಂ.ಪೂ/2006, ದಿನಾಂಕ: 31ನೇ ಅಕ್ಟೋಬರ್ 2006**

ಬೆಂಗಳೂರು ನಗರ – ಶಿವಾಜಿನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿನ ಡಿಕನ್‌ಸನ್ ರಸ್ತೆಯು ಕಾಮರಾಜ ರಸ್ತೆ–ಡಿಸ್ಪೆನ್ಸರಿ ರಸ್ತೆ ಜಂಕ್ಷನ್‌ನಿಂದ ಪ್ರಾರಂಭಗೊಂಡು ಹಲಸೂರು ರಸ್ತೆ – ಡಿಕನ್‌ಸನ್ ರಸ್ತೆ ಜಂಕ್ಷನ್‌ವರೆಗೆ ಕೊನೆಗೊಳ್ಳುತ್ತದೆ. ಡಿಕನ್‌ಸನ್ ರಸ್ತೆ ಒಳಗೊಂಡಂತೆ ಸುತ್ತಮುತ್ತಲಿನ ರಸ್ತೆಗಳಲ್ಲಿ ಇತ್ತೀಚಿನ ದಿನಗಳಲ್ಲಿ ಕೆಲವು ಸಂಚಾರ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತಂದ ಪ್ರಯುಕ್ತ ದ್ವಿಮುಖ ಸಂಚಾರ ವ್ಯವಸ್ಥೆ ಇರುವ ಡಿಕನ್‌ಸನ್ ರಸ್ತೆಯಲ್ಲಿ ವಾಹನ ಸಂಚಾರ ದಟ್ಟಣೆ ಅಧಿಕಗೊಂಡಿರುತ್ತೆ. ಡಿಕನ್‌ಸನ್ ರಸ್ತೆಯಲ್ಲಿ ಹಸನತ್ ಮಹಿಳಾ ಕಾಲೇಜ್ ಮತ್ತು ಇನ್ನಿತರೆ ಖಾಸಗಿ

ಕಂಪನಿಗಳು ಮತ್ತು ಸಂಸ್ಥೆಗಳು ಇರುತ್ತವೆ. ಹಸನತ್ ಮಹಿಳಾ ಕಾಲೇಜ್‌ನಿಂದ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆವರೆಗಿನ ಭಾಗದ ರಸ್ತೆಯಲ್ಲಿ ವಾಹನಗಳು ನಿಲುಗಡೆಗೊಳ್ಳುತ್ತಿರುವುದರಿಂದ ಈ ಭಾಗದ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿ ಸಂಚಾರ ಸ್ಥಗಿತಗೊಳ್ಳುತ್ತಿದ್ದು ಇದರ ಪರಿಣಾಮ ಎಂ.ಜಿ.ರಸ್ತೆ, ಕಬ್ಬನ್ ರಸ್ತೆ, ಹಲಸೂರು ರಸ್ತೆಗಳಿಗೂ ತಾಗಿ ಸುಗಮ ಸಂಚಾರಕ್ಕೆ ಹೆಚ್ಚಿನ ರೀತಿಯಲ್ಲಿ ತೊಂದರೆಯಾಗುತ್ತಿದೆ. ಅದರಲ್ಲೂ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಲ್ಲಿ ಪದೇ ಪದೇ ಬಹಳಷ್ಟು ಸಮಯ ಸಂಚಾರ ಸ್ಥಗಿತಗೊಳ್ಳುವುದರ ಜೊತೆಗೆ ಡಿಕನ್‌ಸನ್ ರಸ್ತೆ, ಕಬ್ಬನ್ ರಸ್ತೆ ಮತ್ತು ಹಲಸೂರು ರಸ್ತೆಗಳ ಉದ್ದಕ್ಕೂ ವಾಹನಗಳು ನಿಲುಗಡೆಗೊಂಡು ಇದನ್ನು ತೆರವುಗೊಳಿಸಲು ಸಂಚಾರ ಪೊಲೀಸರು ಹರಸಾಹಸ ಪಡಬೇಕಾಗಿದೆ. ಪ್ರಯುಕ್ತ ಡಿಕನ್‌ಸನ್ ರಸ್ತೆಯಲ್ಲಿ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಿಂದ ಹಸನತ್ ಮಹಿಳಾ ಕಾಲೇಜ್‌ವರೆಗಿನ ಭಾಗದ ಡಿಕನ್‌ಸನ್ ರಸ್ತೆಯ ಎರಡೂ ಕಡೆಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಡಿಕನ್‌ಸನ್ ರಸ್ತೆಯಲ್ಲಿ ವಾಹನ ನಿಲುಗಡೆ ನಿಷೇಧ ಸಂಬಂಧ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಡಿಕನ್‌ಸನ್ ರಸ್ತೆ:–** ಡಿಕನ್‌ಸನ್ ರಸ್ತೆಯಲ್ಲಿ ಹಲಸೂರು ರಸ್ತೆ–ಡಿಕನ್‌ಸನ್ ರಸ್ತೆ ಜಂಕ್ಷನ್‌ನಿಂದ ಹಸನತ್ ಮಹಿಳಾ ಕಾಲೇಜ್‌ವರೆಗಿನ ಭಾಗದ ಡಿಕನ್‌ಸನ್ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 31.10.2006 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 31.10.2006 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್. 1589 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಶಿಕ್ಷಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಇಡಿ 211 ಯುಪಿಸಿ 2006, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2006**

ಧಾರವಾಡದ ಜನತಾ ಶಿಕ್ಷಣ ಸಮಿತಿಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಧಾರವಾಡ ಜೆ.ಎಸ್.ಎಸ್. ಬನಶಂಕರಿ ಕಲಾ, ವಾಣಿಜ್ಯ ಶಾಂತಿಕುಮಾರ್ ಗುಬ್ಬಿ ವಿಜ್ಞಾನ ಕಾಲೇಜಿನಲ್ಲಿ ಹಿಂದಿ ಅರೆಕಾಲಿಕ ಉಪನ್ಯಾಸಕರಾಗಿ 1993–94 ಮತ್ತು 1994–95ನೇ ಸಾಲಿನಿಂದ ಅದೇ ಕಾಲೇಜಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಅಭಯ ಜಿ.ದೇವದಾಸ್ ರವರು ಎಸ್.ಎಲ್.ಇ.ಟಿ. ಮತ್ತು ಎಂ.ಫಿಲ್. ಅನ್ನು ಪಾಸು ಮಾಡಿದ್ದು ಇವರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003 ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಬೆಳಗಾಂನ ಕೆ.ಎಲ್.ಇ. ಸಂಸ್ಥೆಯಲ್ಲಿನ ಒಂದು ಸಾಮಾನ್ಯ ವರ್ಗಕ್ಕೆ ಮೀಸಲಾಗಿರುವ ಹುದ್ದೆಗೆ ಎದುರಾಗಿ ಯು.ಜಿ.ಸಿ. ವೇತನ ಶ್ರೇಣಿ ರೂ.8,000–13,200 ರಲ್ಲಿ ವಿಲೀನಗೊಳಿಸಲಾಗಿದೆ.

**ಶ್ರೀಮತಿ ಅಭಯ ಜಿ.ದೇವದಾಸ್ ರವರ ವಿವರ:**

| ಅಭ್ಯರ್ಥಿಯ ಹೆಸರು | ವಿಷಯ | ವಿದ್ಯಾರ್ಹತೆ | ಪ್ರವರ್ಗ | ಸೇವೆ ಸಲ್ಲಿಸಿದ ಕಾಲೇಜಿನ ಹೆಸರು | ನಿರಾಕ್ಷೇಪಣಾ ಪತ್ರ ನೀಡಿರುವ ಕಾಲೇಜು |
|---|---|---|---|---|---|
| ಶ್ರೀಮತಿ ಅಭಯ ಜಿ.ದೇವದಾಸ್ | ಹಿಂದಿ | M.Phil., SLET | ಸಾಮಾನ್ಯ | ಧಾರವಾಡದ ಜೆ.ಎಸ್.ಎಸ್. ಬನಶಂಕರಿ ಕಲಾ, ವಾಣಿಜ್ಯ ಶಾಂತಿಕುಮಾರ ಗುಬ್ಬಿ ವಿಜ್ಞಾನ ಕಾಲೇಜು | ಕೆ.ಎಲ್.ಇ. ಸಂಸ್ಥೆ, ಬೆಳಗಾಂ |

1) ಇವರ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ/ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.
3) ಕಾಲೇಜಿನ ಪ್ರಾಂಶುಪಾಲರು ಇವರ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

2. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

3. ಇವರು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1590

**ಸಿ. ಬಸವರಾಜು**

ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಅದಾ:ಕಾನಪ:ಡಿವಿಜಿ:ಸಿಆರ್-89:2006 ದಿನಾಂಕ: 3ನೇ ನವೆಂಬರ್ 2006**

**ಅರ್ಜಿದಾರರು:**

1) ಶ್ರೀಮತಿ ಹಲಿಮಾಬೀ ಕೋಂ ಮಹಮ್ಮದ್
2) ಮಹಮ್ಮದ್ ಹಯಾತ್
ಬಿನ್ ಗೌಸ್ ಮೊಹಿದ್ದಿನ್ ಸಾಬ್
ವಾಸ: ಹಳ್ಳದ ಕೇರಿ, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1) ದಿ ಮ್ಯಾನೇಜರ್,
ಚೇತನ ವಿಸ್ ಸೇಲ್ ಪ್ರೈ.ಲಿ., ಗ್ರಾಸಲಿನ ಡಿವಿಜನ್
ಗ್ರಾಸಲಿನ್ ಇಂಡಸ್ಟ್ರೀಸ್ ಲಿಮಿಟೆಡ್,
ಕುಮಾರಪಟ್ಟಣಂ, ರಾಣಿಬೆನ್ನೂರು ತಾಲ್ಲೂಕು.
2) ದಿ ಅಡ್ಮಿನಿಸ್ಟ್ರೇಟೀವ್ ಆಫೀಸರ್,
ಗ್ರಾಸಿಮ್ ಇಂಡಸ್ಟ್ರೀಸ್ ಲಿ.,
ಯೂನಿಟ್:- ಹರಿಹರ ಪಾಲಿ ಫೈಬರ್, ಕುಮಾರ
ಪಟ್ಟಣಂ, ರಾಣಿಬೆನ್ನೂರು ತಾಲ್ಲೂಕು ಹಾವೇರಿ ಜಿಲ್ಲೆ.

### ಪ್ರಕಟಣೆ

ಶ್ರೀಮತಿ ಹಲೀಮಾಬೀ, ಮಹಮದ್ ಹಯಾತ್ ಇವರು ಮೃತ ಸನಾವುಲ್ಲಾ ಇವರ ತಾಯಿ ಮತ್ತು ತಂದೆ ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸನಾವುಲ್ಲಾ ರವರು ಒಂದನೇ ಪ್ರತಿವಾದಿಗಳಾದ ಗ್ರಾಸಿನ್ ಇಂಡಸ್ಟ್ರೀಸ್ ಲಿ., ಇವರ ಕಂಟ್ರಕ್ಟರ್ ನಲ್ಲಿ ವೆಲ್ಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1591

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬಳ್ಳಾರಿ ವಿಭಾಗ, ದಾವಣಗೆರೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು-1 ಬೆಂಗಳೂರುನಗರ ಜಿಲ್ಲೆ, ನಂ.146, 3ನೇ ಮುಖ್ಯ ರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ, ಬೆಂಗಳೂರು-03 ಇವರ ಕಾರ್ಯಾಲಯ

**ಕ್ರಮ ಸಂಖ್ಯೆ: ಡಿಆರ್‌ಬಿ 1/ಸಮಾಪನೆ/27/2006-07, ದಿನಾಂಕ: 6ನೇ ನವೆಂಬರ್ 2006**

### ತಿದ್ದುಪಡಿ ಆದೇಶ

**ವಿಷಯ:** ಸ್ಥಗಿತಗೊಂಡಿರುವ ಮೈಸೂರು ಎಲೆಕ್ಟ್ರೋಕೆಮಿಕಲ್ಸ್ ಇಂಜಿನೀಯರಿಂಗ್ ಸಹಕಾರ ಸಂಘ ನಿಯಮಿತ ಇಂಡಸ್ಟ್ರಿಯಲ್ ಟೌನ್, ಬೆಂಗಳೂರು ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ: 05.07.2006ರ ಆದೇಶ.

ಉಲ್ಲೇಖದಲ್ಲಿ ಕಾಣಿಸಿರುವ ಈ ಕಛೇರಿಯ ದಿನಾಂಕ: 05.07.2006ರ ಆದೇಶದಲ್ಲಿ ಸಂಘದ ಹೆಸರು "ಮೈಸೂರು ಎಲೆಕ್ಟ್ರೋಕೆಮಿಕಲ್ಸ್ ಇಂಜಿನಿಯರಿಂಗ್ ಸಹಕಾರ ಸಂಘ ನಿಯಮಿತ ಇಂಡಸ್ಟ್ರಿಯಲ್ ಟೌನ್ ಬೆಂಗಳೂರು" ಎಂದು ನಮೂದಿಸಿರುವುದನ್ನು "ದಿ ಮೈಸೂರು ಎಲೆಕ್ಟ್ರೋಕೆಮಿಕಲ್ಸ್ ವರ್ಕ್ಸ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಕೇರಾಫ್ ಕಿರ್ಲೋಸ್ಕರ್ ಬ್ಯಾಟರಿ ಯಶವಂತಪುರ, ಬೆಂಗಳೂರು-22" ಎಂದು ಓದಿಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 6.11.2006 ರಂದು ನೀಡಿರುತ್ತದೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್. 1595

ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

